# ಕರ್ನಾಟಕ ವಿಧಾನ ಪರಿಷತ್ತು

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರು : ಶ್ರೀ ಎಂ. ಎ. ಗೋಪಾಲಸ್ವಾಮಿ

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 1909

ಉತ್ತರಿಸಬೇಕಾಗಿದ್ದ ದಿನಾಂಕ : 23.03.2021

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಹಾಸನ ಜಿಲ್ಲೆ ಚನ್ನರಾಯಪಟ್ಟಣ ತಾಲ್ಲೂಕಿನ ಶೆಟ್ಟಿಹಳ್ಳಿ ಗ್ರಾಮದಲ್ಲಿ ಕಾರ್ಯನಿರ್ವಹಿಸುತ್ತಿರುವ ನಂದಿನಿ ಹೈಟೆಕ್ ಉತ್ಪನ್ನ ಘಟಕಕ್ಕೆ ಕಳೆದ ಮೂರು ವರ್ಷಗಳಲ್ಲಿ ಎಷ್ಟು ಕಾರ್ಮಿಕರನ್ನು ಹೊರಗುತ್ತಿಗೆ ಮೂಲಕ ನೇಮಿಸಿಕೊಳ್ಳಲಾಗಿದೆ; ಯಾವ ಏಜೆನ್ಸಿ ಮೂಲಕ ಈ ಕಾರ್ಮಿಕರನ್ನು ನೇಮಿಸಿಕೊಳ್ಳಲಾಗಿದೆ; (ವಿವರ ನೀಡುವುದು) | ನಂದಿನಿ ಹೈಟೆಕ್ ಉತ್ಪನ್ನ ಘಟಕಕ್ಕೆ 2016-18ನೇ ಸಾಲಿನಲ್ಲಿ ಒಟ್ಟು 245 ಗುತ್ತಿಗೆ ಕಾರ್ಮಿಕರನ್ನು 2019-20 ಮತ್ತು 2020-21ನೇ ಸಾಲುಗಳಿಗೆ 361 ಗುತ್ತಿಗೆ ಕಾರ್ಮಿಕರನ್ನು ಹೊರಗುತ್ತಿಗೆ ಮೂಲಕ ನೇಮಿಸಿಕೊಳ್ಳಲಾಗಿದೆ.<br><br>ಮೆ: ಈಶ್ವರ್ ಎಂಟರ್ ಪ್ರೈಸಸ್, ನಂ.8, 9ನೇ ಕ್ರಾಸ್ ಪುಕ್‌ರಾಜ್ ಬಡಾವಣೆ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-30 ರವರ ಮೂಲಕ ಕಾರ್ಮಿಕರನ್ನು ನೇಮಿಸಿಕೊಳ್ಳಲಾಗಿದೆ. ಆದೇಶಗಳ ಪ್ರತಿಯನ್ನು **ಅನುಬಂಧ-1**ರಲ್ಲಿ ನೀಡಲಾಗಿದೆ. |
| ಆ) | ನಂದಿನಿ ಹೈಟೆಕ್ ಉತ್ಪನ್ನ ಘಟಕದಿಂದ ಪ್ರತಿ ಕಾರ್ಮಿಕರಿಗೆ ಪಾವತಿಸುತ್ತಿರುವ ಸಂಬಳವೆಷ್ಟು; ಇದರಲ್ಲಿ ಹೊರಗುತ್ತಿಗೆ ಪಡೆದಿರುವ ಏಜೆನ್ಸಿಯು ಕಾರ್ಮಿಕರಿಗೆ ಪಾವತಿಸುವುದೆಷ್ಟು; ಈ ಘಟಕ ಮತ್ತು ಏಜೆನ್ಸಿ ನಡುವೆ ಆಗಿರುವ ಒಡಂಬಡಿಕೆಗಳೇನು; ಯಾವ ನಿಯಮಗಳಡಿ ಈ ಕಾರ್ಮಿಕರನ್ನು ನೇಮಿಸಿಕೊಳ್ಳಲಾಗಿದೆ; ಈ ಏಜೆನ್ಸಿಯು ಸರ್ಕಾರದ ನಿಯಮಗಳನ್ವಯ ಕಾರ್ಯನಿರ್ವಹಿಸುತ್ತಿದೆಯೇ; (ದಾಖಲೆಗಳ ಸಹಿತ ವಿವರ ನೀಡುವುದು) | ನಂದಿನಿ ಹೈಟೆಕ್ ಉತ್ಪನ್ನ ಘಟಕದಲ್ಲಿ ಪ್ರತಿ ಕಾರ್ಮಿಕರಿಗೆ ಮಾಹೆಯಾನ ಪಾವತಿಸುತ್ತಿರುವ ವೇತನದ ವಿವರ ಈ ಕೆಳಕಂಡಂತಿರುತ್ತದೆ. (see table below)<br><br>ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆಅಧಿನಿಯಮ, 1999 (ಕೆ.ಟಿ.ಪಿ.ಪಿ.) ಕಾಯ್ದೆಅನ್ವಯ ಇ-ಪ್ರೊಕ್ಯೂರ್‌ಮೆಂಟ್ ಮೂಲಕ ಟೆಂಡರ್ ಆಹ್ವಾನಿಸಿ ಹೊರಗುತ್ತಿಗೆದಾರರ ಮುಖಾಂತರ ಕಾರ್ಮಿಕರನ್ನು ನೇಮಿಸಿಕೊಳ್ಳಲಾಗಿದೆ. ವಿವರ **ಅನುಬಂಧ-2**ರಲ್ಲಿ ನೀಡಲಾಗಿದೆ. |

**(ರೂ.ಗಳಲ್ಲಿ)**

| ಕಾರ್ಮಿಕರ ವಿವರ | ಗುತ್ತಿಗೆದಾರರಿಗೆ ಪಾವತಿಸುತ್ತಿರುವ ವೇತನ | ಗುತ್ತಿಗೆದಾರರು ಸಿಬ್ಬಂದಿಗಳಿಗೆ ಪಾವತಿಸುತ್ತಿರುವ ವೇತನ | ಪಿ.ಎಫ್ ಕಡಿತ | ಇ.ಎಸ್.ಐ ಕಡಿತ |
|---|---|---|---|---|
| ನುರಿತರಲ್ಲದ | 13497.03 | 10340.20 | 2721.40 | 435.42 |
| ನುರಿತ (ಅಡುಗೆ ಭಟ್ಟ) | 15592.46 | 11945.46 | 3143.92 | 502.84 |
| ನುರಿತ (ಸಫಾಯಿ/ ಕರ್ಮಚಾರಿ | 18010.46 | 13797.94 | 3631.42 | 580.84 |

| | | |
|---|---|---|
| | | ಮುಂದುವರೆದು, ಟೆಂಡರ್ ಷರತ್ತು ಮತ್ತು ನಿಯಮಗಳನ್ವಯ ನಂದಿನಿ ಹೈಟೆಕ್ ಉತ್ಪನ್ನ ಘಟಕ ಹಾಗೂ ಗುತ್ತಿಗೆದಾರರು, ಗುತ್ತಿಗೆ ಕರಾರನ್ನು ಮಾಡಿಕೊಳ್ಳಲಾಗಿರುತ್ತದೆ.<br><br>ಸದರಿ ಏಜೆನ್ಸಿಯು ಸರ್ಕಾರವು ನಿಗದಿಪಡಿಸಿರುವ ಕನಿಷ್ಠ ವೇತನದನ್ವಯ ಗುತ್ತಿಗೆ ಕಾರ್ಮಿಕರಿಗೆ ಪ್ರತಿ ಮಾಹೆ ವೇತನ ಪಾವತಿ ಮಾಡುತ್ತಿದ್ದು ಮತ್ತು ಶಾಸನಬದ್ಧ ಪಾವತಿಗಳನ್ನು ಪಾವತಿ ಮಾಡುತ್ತಿದ್ದು, ವಾರದರಜೆ ಹಾಗೂ ಗಳಿಕೆರಜೆ ಮತ್ತು ಸಾರ್ವಜನಿಕ ರಜೆಯನ್ನು ನೀಡಲಾಗುತ್ತಿರುತ್ತದೆ. ಗುತ್ತಿಗೆ ಕರಾರು ಮಾಡಿಕೊಂಡಿದ್ದು, ಕರಾರು ಪತ್ರವನ್ನು **ಅನುಬಂಧ-3** ರಲ್ಲಿ ನೀಡಲಾಗಿದೆ. |
| ಇ) | ಈ ಡೈರಿಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಹೊರಗುತ್ತಿಗೆ ಕಾರ್ಮಿಕರಿಗೆ ಹೊರಗುತ್ತಿಗೆ ಪಡೆದಿರುವ ಏಜೆನ್ಸಿಯು ನಿಯಮಾನುಸಾರ ಕಾಲ ಕಾಲಕ್ಕೆ ಸಂಬಳ ಮತ್ತು ಪಿ.ಎಫ್ ಪಾವತಿಸದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಇದಕ್ಕೆ ನಂದಿನಿ ಹೈಟೆಕ್ ಉತ್ಪನ್ನ ಘಟಕದ ಅಧಿಕಾರಿಗಳು ಕಾರಣರೇ ಅಥವಾ ಹೊರಗುತ್ತಿಗೆ ಪಡೆದಿರುವ ಏಜೆನ್ಸಿ ಕಾರಣವೇ? (ಮಾಹಿತಿ ನೀಡುವುದು) | ಘಟಕದಲ್ಲಿ ಕಾರ್ಯನಿರ್ವಹಿಸುತ್ತಿರುವ ಹೊರಗುತ್ತಿಗೆ ಕಾರ್ಮಿಕರಿಗೆ ಹೊರಗುತ್ತಿಗೆ ಪಡೆದಿರುವ ಏಜೆನ್ಸಿಯವರು ನಿಯಮಾನುಸಾರ ಕಾಲ ಕಾಲಕ್ಕೆ ವೇತನ ಪಾವತಿಯನ್ನು ಬ್ಯಾಂಕ್ ಖಾತೆಯ ಮೂಲಕ ಪಾವತಿಸುತ್ತಿರುತ್ತಾರೆ. ಶಾಸನಬದ್ಧ ಪಾವತಿಗಳಾದ ಪಿ.ಎಫ್ ಹಾಗೂ ಇ.ಎಸ್.ಐ. ವಂತಿಗೆ ಹಣವನ್ನು ಸಂಬಂಧಪಟ್ಟ ಸಂಸ್ಥೆಗಳಿಗೆ ಕಾಲಕಾಲಕ್ಕೆ ಪಾವತಿಸುತ್ತಿದ್ದಾರೆ. ಮಾಹಿತಿ **ಅನುಬಂಧ-4** ರಲ್ಲಿ ನೀಡಲಾಗಿದೆ. |

**ಕಡತ ಸಂಖ್ಯೆ: ಸಿಒ 70 ಸಿಸಿಬಿ 2021**

(signature)
**(ಎಸ್. ಟಿ. ಸೋಮಶೇಖರ್)**
ಸಹಕಾರ ಸಚಿವರು.

ಅನುಬಂಧ - 1



# ನಂದಿನಿ ಹೈಟೆಕ್ ಪ್ರಾಡಕ್ಟ್ ಪ್ಲಾಂಟ್ ಶೆಟ್ಟಿಹಳ್ಳಿ ಚನ್ನರಾಯಪಟ್ಟಣ

ಸಂಖ್ಯೆ: ಕಹಾಮ :ನಹೈಪ್ರಾಪ್ಲಾ/ಚರಾಪ/ಗು.ಕಾ/2016 / 134 ದಿನಾಂಕ: 13.04.2016

## ಗುತ್ತಿಗೆ ಕಾರ್ಯಾದೇಶ

ವಿಷಯ: ಘಟಕದಲ್ಲಿ ವಿವಿಧ ಗುತ್ತಿಗೆ ಕೆಲಸಗಳನ್ನು ನಿರ್ವಹಿಸಲು ಗುತ್ತಿಗೆ ಕಾರ್ಮಿಕರನ್ನು ಒದಗಿಸುವ ಬಗ್ಗೆ

ಉಲ್ಲೇಖ 1. ಟೆಂಡರ್ ಪ್ರಕಟಣೆ ಸಂಖ್ಯೆ:KMF/NHPP-CRP/LABOUR TENDER /0008/2015-16 Dt.07.10.2015

~~2. ದಿನಾಂಕ: 28.12.2015 ರ ಟೆಂಡರ್ ಆಹ್ವಾನ ಸಮಿತಿ ಸಭೆಯ ನಡವಳಿ~~

3. ದಿನಾಂಕ: 05.03.2016 ರ ಟೆಂಡರ್ ಆಹ್ವಾನ / ಅಂಗೀಕಾರ ಸಮಿತಿ ಸಭೆಯ ನಡವಳಿ

4. ಒಪ್ಪಿಗೆ ಪತ್ರ ಸಂಖ್ಯೆ: KMF/NHPP-CRP/PUR/LabourTender/2015-16/3793 Dt.29.03.2016

5. ಕರಾರು ಪತ್ರ ದಿನಾಂಕ: 13.04.2016

- - - -

ಕಹಾಮ ನಂದಿನಿ ಹೈಟೆಕ್ ಪ್ರಾಡಕ್ಟ್ ಪ್ಲಾಂಟ್ ಇಲ್ಲಿಗೆ ಉತ್ಪಾದನೆ ಮತ್ತು ಸ್ವಚ್ಛತಾ ಕೆಲಸಗಳ ನಿರ್ವಹಣೆಗೆ ಗುತ್ತಿಗೆ ಆಧಾರದ ಮೇಲೆ ಕಾರ್ಮಿಕರನ್ನು ನೀಡುವ ಕುರಿತಂತೆ ಸಲ್ಲಿಸಲಾದ ಉಲ್ಲೇಖ (1) ಟೆಂಡರ್ ಹಾಗೂ ಉಲ್ಲೇಖ ( 5) ರ ಕರಾರು ಪತ್ರ ಇವುಗಳನ್ನು ಪರಿಗಣಿಸಿ ದಿನಾಂಕ: 15.04.2016 ರಿಂದ 14.04.2018 ವರೆಗೆ ಎರಡು ವರ್ಷಗಳ ಅವಧಿಗೆ ಕರಾರು ಪತ್ರದಲ್ಲಿ ಒಪ್ಪಿರುವಂತೆ ಈ ಕೆಳಗೆ ನಮೂದಿಸಿರುವ ದರಗಳಲ್ಲಿ ಮತ್ತು ನಿಬಂಧನೆ ಹಾಗೂ ಷರತ್ತಿಗೊಳಪಟ್ಟು ಗುತ್ತಿಗೆ ಆಧಾರದ ಮೇಲೆ ಕಾರ್ಮಿಕರನ್ನು ಒದಗಿಸಿ ವಿವಿಧ ಗುತ್ತಿಗೆ ಕೆಲಸಗಳನ್ನು ನಿರ್ವಹಿಸಲು ಈ ಮೂಲಕ ಆದೇಶಿಸಿದೆ.

| ಕ್ರ. ಸಂ | ವಿವರ | ಕುಶಲರಲ್ಲದ ಕಾರ್ಮಿಕರು | ಅಡುಗೆ ಭಟ್ಟರು |
|---|---|---|---|
| | ಪ್ರತಿ ಮಾಹೆಯ ವೇತನ | ರೂ.6267.15 | ರೂ. 6917.90 |
| | ಒಂದು ದಿನಕ್ಕೆ ಒಬ್ಬರಿಗೆ 8 ಗಂಟೆಯ ಅವಧಿಗೆ ನೀಡುವ ವೇತನದ ಮೊತ್ತ | | |
| 1 | ಒಂದು ದಿನದ ವೇತನ = ಪ್ರತಿ ಮಾಹೆಯ ವೇತನ/26 | ರೂ. 241.04 | ರೂ.266.07 |
| 2 | ಗಳಿಕೆ ರಜೆಯ ಬಾಬ್ತು = 18.25 X ಪ್ರತಿ ದಿನದ ವೇತನ / 365 | ರೂ. 12.05 | ರೂ. 13.30 |
| 3 | ಪಿ.ಎಫ್ ಬಾಬ್ತು ಶೇ. 13.36 X ಕ್ರಸಂ. 1 | ರೂ.32.20 | ರೂ.35.55 |
| 4 | ಕಾರ್ಮಿಕರಿಗೆ ನೀಡುವ ಕನಿಷ್ಠ ವೇತನ ಮೊತ್ತ ದಿನಕ್ಕೆ ಕ್ರ.ಸಂ.(1+2) | ರೂ.253.09 | ರೂ. 279.37 |
| 5 | ಪ್ರೋತ್ಸಾಹದಾಯಕ ಮೊತ್ತ | ರೂ. 45.00 | ರೂ. 45.00 |
| 6 | ಒಟ್ಟು ಮೊತ್ತ ಕ್ರಸಂ. (3+4+5 ) | ರೂ.330.29 | ರೂ. 359.92 |
| 7 | ಸೇವಾ ಶುಲ್ಕ = ಕ್ರಸಂ. 6 X ಸೇವಾ ಶುಲ್ಕ ಅನ್ವಯಿಸುತ್ತದೆ. | 0.22% | 0.22% |
| 8 | ಒಟ್ಟು ಮೊತ್ತ ಕ್ರಸಂ. (6+7) | | |
| 9 | ಸೇವಾ ತೆರಿಗೆ ಕ್ರಸಂ. 8 X ಸೇವಾ ತೆರಿಗೆ ಅನ್ವಯವಾಗುವಂತೆ (ಶೇ.14.5) | | |
| 10 | ಗುತ್ತಿಗೆದಾರರಿಗೆ ನೀಡುವ ಒಟ್ಟು ಮೊತ್ತ (ಕ್ರಸಂ. 8+9 ) | | |
| 11 | ಕಡಿತಗಳು(ಮಾಲೀಕರ ವಂತಿಕೆ-ಶೇ.13.36) | 32.20 | 35.54 |
| 12 | ಕಡಿತಗಳು(ಕಾರ್ಮಿಕರ ವಂತಿಕೆ-ಶೇ.12) | 28.92 | 31.92 |
| 13 | ಕಾರ್ಮಿಕರಿಗೆ ಪಾವತಿಸುವ ಕನಿಷ್ಠ ವೇತನ | 269.17 | 292.48 |

16/4/16

ಘಟಕದ ವಿವಿಧ ಕೆಲಸಗಳನ್ನು ಭಾಗ-ಎ ಮತ್ತು ಭಾಗ-ಬಿ ಎಂದು ಎರಡು ಭಾಗಗಳಲ್ಲಿ ವಿಂಗಡಿಸಿ ಪ್ರತಿ ದಿನಕ್ಕೆ 3 ಪಾಳಿಗಳ ಕೆಲಸಗಳಿಗೆ ಬೇಕಾದ ಕಾರ್ಮಿಕರ ಸಂಖ್ಯೆಯನ್ನು ಈ ಕೆಳಕಂಡ ಕೋಷ್ಟಕದಂತೆ ನಿಗಧಿಪಡಿಸಲಾಗಿದೆ.

| ಭಾಗ –ಎ | | | |
|---|---|---|---|
| ಕ್ರಸಂ. | ಕೆಲಸದ ಪ್ರಕಾರ ಮತ್ತು ಸ್ಥಳ | ನುರಿತರಲ್ಲದವರ ಕಾರ್ಮಿಕರ ಸಂಖ್ಯೆ | ಅಡುಗೆ ಭಟ್ಟರು |
| 1 | ಉತ್ಪಾದನೆ ವಿಭಾಗ | 12 | |
| 2 | ಉತ್ಪಾದನೆ ವಿಭಾಗದ ಸ್ವಚ್ಛತೆ | 4 | |
| 3 | ಹಾಲಿನ ಪುಡಿ ವಿಭಾಗ | 40 | |
| 4 | ವಿದ್ಯುತ್ ವಿಭಾಗ | 4 | |
| 5 | ಬೆಣ್ಣೆ / ತುಪ್ಪ ವಿಭಾಗ | 26 | |
| 6 | ಗನ್ನಿಕಡ ಪಂಪ್ ಹೌಸ್ | 1 | |
| 7 | ಶೀಥಲೀಕರಣ ವಿಭಾಗ | 3 | |
| 8 | ಗುಣ ನಿಯಂತ್ರಣ ವಿಭಾಗ | 15 | |
| 9 | ಬಾಯ್ಲರ್ ವಿಭಾಗ | 3 | |
| 10 | ನಿರ್ವಹಣೆ ವಿಭಾಗ | 3 | |
| | ಒಟ್ಟು | 111 | |
| ಭಾಗ -ಬಿ | | | |
| 11 | ಉಪಹಾರ ಗೃಹ | 9 | 3 |
| 12 | ಆಡಳಿತ / ನಿರ್ದೇಶಕರ ಕಚೇರಿ ಸಾಮಾನ್ಯ ಸ್ವಚ್ಛತೆ | 4 | |
| 13 | ಯು.ಹೆಚ್.ಟಿ ವಿಭಾಗ | 80+*15 | |
| 14 | ಉಗ್ರಾಣ ವಿಭಾಗ | 2 | |
| 15 | ಖರೀದಿ ವಿಭಾಗ | 1 | |
| 16 | ಎಫ್.ಐ.ಎಸ್ ವಿಭಾಗ | 2 | |
| 17 | ಉತ್ಪಾದನೆ/ ಅಭಿಯಂತರ ಕಚೇರಿ ಸ್ವಚ್ಛತೆ | 2 | |
| 18 | ತೋಟಗಾರಿಕೆ | 8 | |
| 19 | ಸಿಸ್ಟಂ ವಿಭಾಗ | 1 | |
| 20 | ವಿತ್ತ ವಿಭಾಗ | 1 | |
| 21 | ಬೆಣ್ಣೆ ಬಾಕ್ಸ್ ಸಾಗಾಣಿಕೆ | 6 | |
| | ಒಟ್ಟು | 131 | |
| | ಒಟ್ಟು (ಭಾಗ-ಎ+ಭಾಗ-ಬಿ) | 242 | 3 |

* ರಾತ್ರಿ ಪಾಳಿಯಲ್ಲಿ ಯು.ಹೆಚ್.ಟಿ ಉತ್ಪಾದನೆ ಇದ್ದಲ್ಲಿ ಗುತ್ತಿಗೆ ಕಾರ್ಮಿಕರನ್ನು ನೀಡುವುದು.

ಘಟಕದ ಉತ್ಪಾದನೆಗೆ ಅನುಗುಣವಾಗಿ 3 ಪಾಳಿಗಳನ್ನು ಒಳಗೊಂಡಂತೆ ಅವಶ್ಯಕತೆಗನುಗುಣವಾಗಿ ಕಾರ್ಮಿಕರನ್ನು ಪಡೆಯಲಾಗುವುದು.

## ಷರತ್ತು ಮತ್ತು ನಿಬಂಧನೆಗಳು:

1.0 ಗುತ್ತಿಗೆಯ ಸಿಂಧುತ್ವ:

1. ಗುತ್ತಿಗೆಯ ಅವಧಿಯು ಕರಾರಿನಂತೆ ಕೆಲಸದ ಆದೇಶ ಜಾರಿಗೆ ಬರುವ ದಿನಾಂಕದಿಂದ ಎರಡು ವರ್ಷಗಳ ಅವಧಿಗೆ ಜಾರಿಯಲ್ಲಿರುತ್ತದೆ.
2. ಕರಾರನ್ನು ಸಹಿ ಮಾಡಿದ ಮತ್ತು ನಿಗದಿಪಡಿಸಿದ ಭದ್ರತಾ ಠೇವಣಿಯನ್ನು ಬ್ಯಾಂಕ್ ಗ್ಯಾರಂಟಿ ರೂಪದಲ್ಲಿ ಕರ್ನಾಟಕ ಬ್ಯಾಂಕ್ ಬೆಂಗಳೂರು ಇಲ್ಲಿ ರೂ. 12,63,755/-ಗಳನ್ನು ದಿನಾಂಕ: 08.04.2018 ರಂದು ಸಲ್ಲಿಸಿದ್ದು, ನಂದಿನಿ ಹೈಟೆಕ್ ಪ್ರಾಡಕ್ಟ್ ಪ್ಲಾಂಟ್ ಘಟಕವು ಹೊರಡಿಸುವ ಆದೇಶದ ದಿನಾಂಕದಿಂದ ಗುತ್ತಿಗೆಯು ಪ್ರಾರಂಭವಾಗುವುದು.
3. ಗುತ್ತಿಗೆ ಅವಧಿಯು ಮುಕ್ತಾಯಗೊಂಡ ನಂತರ ವಿವೇಚನೆಯ ಮೇರೆಗೆ ಪ್ರಸ್ತುತ ಗುತ್ತಿಗೆ ಷರತ್ತಿಗೆ ಒಳಪಟ್ಟು ಹಾಲಿ ಚಾಲ್ತಿಯಲ್ಲಿರುವ ದರದಲ್ಲಿಯೆ ಗುತ್ತಿಗೆ ಅವಧಿಯನ್ನು 90 ದಿನಗಳ ಅವಧಿಗೆ ವಿಸ್ತರಿಸುವ ಅಧಿಕಾರವನ್ನು ನಿರ್ದೇಶಕರು ಬರಾಪ ರವರು ಹೊಂದಿರುತ್ತಾರೆ.

2.0 ಗುತ್ತಿಗೆ ದರ :

1. ವಿಸ್ತರಿಸಿದ ಅವಧಿ ಒಳಗೊಂಡು ಗುತ್ತಿಗೆ ಅವಧಿಯಲ್ಲಿ ಗುತ್ತಿಗೆ ದರವು ಕ್ರಮ ಸಂಖ್ಯೆ2 ಮತ್ತು 3 ಕ್ಕೆ ಒಳಪಟ್ಟು ಯಾವುದೆ ಹೆಚ್ಚಳ/ ಇಳಿಕೆ ಇಲ್ಲದೆ ಸ್ಥಿರವಾಗಿ ಇರುತ್ತದೆ.
2. ಒಪ್ಪಂದದ ಪ್ರಕಾರ ಪೂರ್ಣವಾಗಿ ಮತ್ತು ತೃಪ್ತಿಕರವಾಗಿ ನಿರ್ವಹಿಸಿದ ಕೆಲಸಕ್ಕೆ ಬಿಲ್ ಮೊತ್ತವನ್ನು ಘಟಕವು ಸಂಬಂಧಪಟ್ಟ ಗುತ್ತಿಗೆದಾರರಿಗೆ ಪಾವತಿಸಲಾಗುವುದು.
3. ಸರ್ಕಾರವು ಗುತ್ತಿಗೆ ಕಾರ್ಮಿಕರಿಗೆ ಕಾಲ ಕಾಲಕ್ಕೆ ಪರಿಷ್ಕರಿಸುವ ಕನಿಷ್ಠ ವೇತನ ಮತ್ತು ತುಟ್ಟಿ ಭತ್ಯೆಯ ಹೆಚ್ಚುವರಿ ಮೊಬಲಗನ್ನು PF. ಗಳಿಗೆ ಸಂಬಂಧಿಸಿದಂತೆ ಗುತ್ತಿಗೆದಾರರ ಹೆಚ್ಚುವರಿ ಭಾಗದೊಂದಿಗೆ ಘಟಕದಿಂದ ಪಾವತಿಸಲಾಗುವುದು.
4. ಗುತ್ತಿಗೆದಾರರು ತಮ್ಮ ಸಿಬ್ಬಂದಿಗೆ ವಾರ್ಷಿಕವಾರು ಬೋನಸ್ ಕಾಯಿದೆಯನ್ವಯ ಬೋನಸ್ ಘೋಷಿಸಿ ಪಾವತಿ ಮಾಡಿದ್ದಾದಲ್ಲಿ ಅದನ್ನು ಕಹಾಮ ಇದರ ಕಾಯ್ದೆ ನಿಯಮಗಳಿಗೆ ಒಳಪಟ್ಟು ಮರುಪಾವತಿ ಮಾಡಲು ಕ್ರಮವಿಡಲಾಗುವುದು. ಅದಕ್ಕೆ ಪೂರ್ವದಲ್ಲಿ ಗುತ್ತಿಗೆದಾರರು ಬೋನಸ್‌ನ್ನು ಅರ್ಹ ಕಾರ್ಮಿಕರಿಗೆ ನಿಯಮಾನುಸಾರ ಘಟಕದ ಪ್ರತಿನಿಧಿಯ ಸಮ್ಮುಖದಲ್ಲಿ ಪಾವತಿಸುವುದು ಮತ್ತು ಪುಸ್ತಕದಲ್ಲಿ ಈ ದೃಢೀಕರಣ ಪಡೆಯುವುದು.
5. ನಿಯಮಾನುಸಾರ ಪಾವತಿಸುವ ಸೇವಾ ತೆರಿಗೆಯನ್ನು ಘಟಕದಿಂದ ಮರುಪಾವತಿಸಲಾಗುವುದು.

3.0 ಬಿಲ್ ಪಾವತಿ:

1. ಗುತ್ತಿಗೆದಾರರು ಪ್ರತಿ ತಿಂಗಳು ನಿಯೋಜಿಸಿದ ನೌಕರರ ಹಾಗೂ ಇತರೆ ದಾಖಲೆಗಳನ್ನು ಒಳಗೊಂಡ ಬಿಲ್ ಗಳನ್ನು ಎರಡನೆ ದಿನಾಂಕದೊಳಗಾಗಿ ನಿಗದಿಪಡಿಸಿದ ನಮೂನೆಯಲ್ಲಿ ದ್ವಿಪ್ರತಿಯಲ್ಲಿ ನಿರ್ದೇಶಕರು ನಹೈಪ್ರಾಪ್ಲಾ ಬರಾಪ ರವರಿಗೆ ಸಲ್ಲಿಸಬೇಕು. ನಿಬಂಧನೆಗೆ ಅನುಸಾರ ಕೆಲಸವನ್ನು ತೃಪ್ತಿಕರವಾಗಿ ನಿರ್ವಹಿಸಿದ ಬಗ್ಗೆ ಸಂಬಂಧಿಸಿದ ಅಧಿಕಾರಿಗಳ ಪರಿಶೀಲನೆ ಮತ್ತು ದೃಢೀಕರಣದ ಆಧಾರದ ಮೂಲದಲ್ಲಿ ಆಧಾಯ ತೆರಿಗೆಯ (TDS) ಕಟಾವಣೆ ಒಳಗೊಂಡು ಎಲ್ಲಾ ಶಾಸನಬದ್ಧ ಕಟಾವಣೆ ಮತ್ತು ಘಟಕಕ್ಕೆ ಬರಬೇಕಾದ ಮೊತ್ತ ಹಾಗೂ ವಿಧಿಸಬಹುದಾದ ದಂಡಗಳ ಕಟಾವಣೆ ಮಾಡಿ ಉಳಿಕೆ ಮೊತ್ತವನ್ನು ಚೆಕ್ ಮುಖೇನ ಗುತ್ತಿಗೆದಾರರಿಗೆ ಪಾವತಿಸಲಾಗುವುದು.
2. ಗುತ್ತಿಗೆದಾರರು ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ ಹಣ ಪಡೆಯಲು ಇಚ್ಚಿಸಿದಲ್ಲಿ ತಾವೇ ಸ್ವತ: ಡಿ.ಡಿ. ವೆಚ್ಚವನ್ನು ಭರಿಸಬೇಕಾಗುತ್ತದೆ.
3. ಗುತ್ತಿಗೆದಾರರು ಘಟಕದಲ್ಲಿ ಗುತ್ತಿಗೆಯನ್ನು ನಿರ್ವಹಿಸುವ ಅವಧಿಯಲ್ಲಿ ಘಟಕದಿಂದ ಪಡೆಯುವ ಅಥವಾ ಲಭ್ಯವಾಗುವ ಘಟಕದ ವ್ಯವಹಾರ ನಿರ್ವಹಣೆಗೆ ಸಂಬಂಧಿಸಿದ ಲಿಖಿತ ಮತ್ತು ಮೌಖಿಕ ಮಾಹಿತಿಯನ್ನು ಯಾರಿಗೂ ಬಯಲು ಮಾಡಬಾರದು ಮತ್ತು ಅಂತಹ ಮಾಹಿತಿಯ ರಹಸ್ಯವನ್ನು ಕಾಪಾಡಬೇಕು.

16. ಕಾಲಕಾಲಕ್ಕೆ ಆಗುವ ತಿದ್ದುಪಡಿಗಳೊಂದಿಗೆ ಜಾರಿಯಲ್ಲಿರುವ ವೇತನ ಪಾವತಿ ಕಾಯಿದೆ 1936, ಕನಿಷ್ಠ ವೇತನ ಕಾಯಿದೆ 1948, ಗುತ್ತಿಗೆ ಕಾರ್ಮಿಕ (ನಿಯಂತ್ರಣ ಮತ್ತು ರದ್ಧತಿ) ಕಾಯಿದೆ 1970, ನೌಕರರ ರಾಜ್ಯ ವಿಮಾ ಕಾಯಿದೆ 1948/ ಕೆಲಸಗಾರರ ಪರಿಹಾರ ಕಾಯಿದೆ 1923 ನೌಕರರ ಭವಿಷ್ಯನಿಧಿ ಮತ್ತು ಸಂಕೀರ್ಣ ಉಪಬಂಧ ಗಳ ಕಾಯಿದೆ 1952 ಬೋನಸ್ ಪಾವತಿ ಕಾಯಿದೆ, 1965 ಕಾರ್ಖಾನೆ ಕಾಯಿದೆ , 1948 ಉಪಧನ ಕಾಯಿದೆ , 1972 , ಕರ್ನಾಟಕ ಕಾರ್ಮಿಕ ಕಲ್ಯಾಣ ನಿಧಿ ಕಾಯಿದೆ 1965 , ಕರ್ನಾಟಕ ಕೈಗಾರಿಕೆ ಸಂಸ್ಥೆಗಳ (ರಾಷ್ಟ್ರೀಯ ಮತು ಹಬ್ಬದ ರಜಾ ದಿನಗಳು) ನಿಯಮಗಳು 1963 , ಆದಾಯ/ ವೃತ್ತಿ/ ಸೇವಾತೆರಿಗೆ ಕಾಯಿದೆ ಮುಂತಾದ ಕೆಲಸಗಾರರು ನಿಯೋಜನೆ ಹಾಗೂ ಗುತ್ತಿಗೆ ವ್ಯವಹಾರಕ್ಕೆ ಸಂಬಂಧಿಸಿದಂತೆ ಅನ್ವಯಿಸುವ ಕಾಲಕಾಲಕ್ಕೆ ಆಗುವ ತಿದ್ದುಪಡಿಗಳೊಂದಿಗೆ ಜಾರಿಯಲ್ಲಿರುವ ಕೇಂದ್ರ ಮತ್ತು ರಾಜ್ಯಗಳ ವಿವಿಧ ಕಾನೂನುಗಳು (Statutes), ಅಧಿನಿಯಮಗಳು (Acts) ನಿಯಮಗಳು (Rules) ವಿನಿಯಮಗಳು (Regulations) ಮತ್ತು ಆದೇಶಗಳು (Orders) ಇವುಗಳನ್ನು ಪಾಲಿಸಲು ಗುತ್ತಿಗೆದಾರರು ಬದ್ಧರಾಗಿರಬೇಕು.

17. ಹಿಂದಿನ ನಡತೆ ಸರಿಯಿಲ್ಲದ ಕೆಲಸಗಾರರನ್ನು ಗುತ್ತಿಗೆದಾರರು ಘಟಕದ ಕೆಲಸಕ್ಕೆ ನಿಯೋಜಿಸಬಾರದು ಗುತ್ತಿಗೆದಾರರು ಒದಗಿಸುವ ಕೆಲಸಗಾರರು ಕಾನೂನು ಬಾಹಿರ ಚಟುವಟಿಕೆಗಳಲ್ಲಿ ತೊಡಗಿರುವುದು ಕಂಡಬಂದಲ್ಲಿ ಅಥವಾ ನಡತೆ/ ಕೆಲಸ ತೃಪ್ತಿಕರವಿಲ್ಲವೆಂದು ಘಟಕವು ತಿಳಿಸಿದ್ದಲ್ಲಿ ಅಂಥವರನ್ನು ಕೂಡಲೆ ಬದಲಾಯಿಸುವುದು.ಕೆಲಸಗಾರರು ಶಿಸ್ತಿನಿಂದ ಕಾರ್ಯನಿರ್ವಹಿಸುವಂತೆ ಸೂಕ್ತಕ್ರಮ ಕೈಗೊಳ್ಳುವುದು ಗುತ್ತಿಗೆದಾರರ ಜವಾಬ್ದಾರಿಯಾಗಿರುತ್ತದೆ. ಗುತ್ತಿಗೆ . ಕಾರ್ಮಿಕರನ್ನು ಗುತ್ತಿಗೆದಾರರು ನಿಯೋಜಿಸುವ ಪೂರ್ವದಲ್ಲಿ ಅವರು ಯಾವುದೇ ಅನರ್ಹತೆ ಹೊಂದದ ಕ್ರಿಮಿನಲ್ ಹಿನ್ನಲೆ ಹೊಂದದೆ ಇರುವಂತಹ ಪೋಲೀಸ್ ಇಲಾಖೆಯಿಂದ ದೃಢೀಕರಿಸಿಕೊಳ್ಳುವುದು. ಇಲ್ಲವಾದಲ್ಲಿ ಗುತ್ತಿಗೆದಾರರು ಜವಾಬ್ದಾರರಾಗಿರುತ್ತಾರೆ.

18. ಗುತ್ತಿಗೆದಾರರು ಕಾರ್ಮಿಕರನ್ನು ನಿಯೋಜಿಸುವ ಪೂರ್ವದಲ್ಲಿ ಪ್ರತಿ ಸಿಬ್ಬಂದಿಗೂ ನೇಮಕಾತಿ ಆದೇಶವನ್ನು ನೀಡಿ ಅದರ ಪ್ರತಿಯನ್ನು ಕಚೇರಿಗೆ ಸಲ್ಲಿಸತಕ್ಕದ್ದು ಹಾಗೂ ಕೆಲಸಗಾರರು ಗುರುತಿನ ಸಂಖ್ಯೆಯನ್ನು ಪಡೆದು ತಮ್ಮ ಕೆಲಸಗಾರರ ಭಾವ ಚಿತ್ರವನ್ನು ಒಳಗೊಂಡ ಗುರುತಿನ ಚೀಟಿಯನ್ನು ಮತ್ತು ಪ್ರತಿ ತಿಂಗಳು ವೇತನ ಪಟ್ಟಿಯನ್ನು ನೀಡಬೇಕು. ಗುತ್ತಿಗೆದಾರರು ಕೆಲಸಗಾರರ ಹಾಜರಾತಿ ಪುಸ್ತಕ, ವೇತನ ಬಟಾವಣೆ ಪುಸ್ತಕ ಹಾಗೂ ಭಾವಚಿತ್ರದೊಂದಿಗೆ ವಿಳಾಸದ ವಿವರವನ್ನು, ಭವಿಷ್ಯ ನಿಧಿ, ರಾಜ್ಯ ನೌಕರರ ವಿಮಾವಂತಿಕೆ ದಾಖಲಾತಿಗಳನ್ನು ಕಾನೂನಿನಂತೆ ಇಟ್ಟುಕೊಂಡು ಅಗತ್ಯ ಬಿದ್ದಲ್ಲಿ ಶಾಸನ ಬದ್ಧ ಪ್ರಾಧಿಕಾರ / ಘಟಕದ ಪರಿಶೀಲನೆಗೆ ಸಲ್ಲಿಸಲು ಬದ್ಧರಾಗಿರುತ್ತಾರೆ. ಘಟಕದ ಕೆಲಸಕ್ಕೆ ನಿಯೋಜಿಸುವ ಎಲ್ಲಾ ಗುತ್ತಿಗೆ ಸಿಬ್ಬಂದಿಗೆ ಕಾಯಿದೆಯಂತೆ ಎಂಪ್ಲಾಯ್‌ಮೆಂಟ್ ಕಾರ್ಡ್ ಪ್ರತಿಯನ್ನು ಘಟಕಕ್ಕೆ \ ನೀಡುವುದು, ಮಾಸಿಕ ವೇತನದ ವಿವರದ ಚೀಟಿಗಳನ್ನು ನೀಡಬೇಕು.

19. ಗುತ್ತಿಗೆದಾರರು ಕೆಲಸಗಾರರಿಗೆ ಪಾವತಿಸುವ ವೇತನದಲ್ಲಿ ಭವಿಷ್ಯ ನಿಧಿ ಮತ್ತು ನೌಕರರ ರಾಜ್ಯವಿಮೆ ವಂತಿಗೆಯನ್ನು ಕಟಾಯಿಸಿ, ಸಂಬಂಧಪಟ್ಟ ಇಲಾಖೆಗೆ ಮಾಲೀಕರ ವಂತಿಗೆಯೊಂದಿಗೆ ಪಾವತಿಸಲು ಬದ್ಧರಿರುತ್ತಾರೆ. ಸದರಿ ವಂತಿಕೆ ಪಾವತಿಯಲ್ಲಿ ಸುಸ್ತಿದಾರರಾದಲ್ಲಿ ಅಥವಾ ವ್ಯತ್ಯಾಸವಾದಲ್ಲಿ ದಂಡ ಒಳಗೊಂಡು ತತ್‌ಪರಿಣಾಮ ಉದ್ಭವಿಸುವ ಪರಿಣಾಮಗಳಿಗೆ ಗುತ್ತಿಗೆದಾರರೇ ಜವಾಬ್ದಾರರಾಗಿರುತ್ತಾರೆ. ಘಟಕವು ಯಾವುದೇ ರೀತಿಯಲ್ಲಿ ಇದಕ್ಕೆ ಜವಾಬ್ದಾರರಲ್ಲ. ಅನಿವಾರ್ಯ ಸಂಧರ್ಭಗಳಲ್ಲಿ ಭವಿಷ್ಯ ನಿಧಿ ಮತ್ತು ನೌಕರರ ರಾಜ್ಯ ವಿಮಾ ದೇಣಿಗೆಯನ್ನು ಗುತ್ತಿಗೆದಾರರ ಬಿಲ್ಲಿನಲ್ಲಿ ಕಟಾಯಿಸಿ ಸಂಬಂಧಿಸಿದವರಿಗೆ ಪಾವತಿಸಲು ಘಟಕವು ಅಧಿಕಾರವನ್ನು ಹೊಂದಿರುತ್ತದೆ. ಗುತ್ತಿಗೆದಾರರು ನಿಯೋಜಿಸುವ ಪ್ರತಿ ಒಬ್ಬ ಕೆಲಸಗಾರರಿಗೆ ಸಂಬಂಧಿಸಿದಂತೆ ಹಿಂದಿನ ತಿಂಗಳ ಭವಿಷ್ಯ ನಿಧಿ ಮತ್ತು ನೌಕರರ ರಾಜ್ಯವಿಮೆ ವಂತಿಗೆಯನ್ನು

ಸಂಬಂಧಪಟ್ಟ ಇಲಾಖೆಗೆ ಪಾವತಿಸಿರುವ ಬಗ್ಗೆ ದಾಖಲಾತಿಗಳನ್ನು (challan) ಪ್ರತಿ ತಿಂಗಳ ಬಿಲ್ಲಿನೊಂದಿಗೆ ದೃಢೀಕರಿಸಿ ಕಡ್ಡಾಯವಾಗಿ ಲಗತ್ತಿಸಬೇಕು ಮತ್ತು ವೇತನದ ಪುಸ್ತಕವನ್ನು ಪರಿಶೀಲನೆಗೆ ಹಾಜರುಪಡಿಸಬೇಕು. ಗುತ್ತಿಗೆದಾರರು ಪಿ.ಎಫ್. ಪಾವತಿಗೆ ಸಂಬಂಧಿಸಿದಂತೆ ಇಲಾಖೆಯು ನಿಯಮಾನುಸಾರ ನೀಡುವ ಮಾಸಿಕ / ವಾರ್ಷಿಕ ದಾಖಲೆಗಳನ್ನು ಕಾರ್ಮಿಕರಿಗೆ ಆಗಿಂದಾಗ್ಗೆ ಒದಗಿಸುವುದು. ಇಲ್ಲದಿದ್ದಲ್ಲಿ ಬಿಲ್ಲು ಪಾವತಿಸಲಾಗುವುದಿಲ್ಲ.

೨೦. ಘಟಕ ವಹಿಸಿರುವ ಕೆಲಸವನ್ನು ಸಂಬಂಧಿಸಿದ ಅಧಿಕಾರಿಗಳ ಸೂಚನೆಯಂತೆ ನಿರ್ವಹಿಸುವುದು . ಗುತ್ತಿಗೆ ಕಾರ್ಮಿಕರು ಕೆಲಸವಿರುವಾಗ ಮಾತ್ರ ಘಟಕದ ಆವರಣವನ್ನು ಪ್ರವೇಶಿಸುವುದು ಮತ್ತು ಕೆಲಸ ಇಲ್ಲದ ಅವಧಿಯಲ್ಲಿ ಘಟಕದ ಆವರಣದಲ್ಲಿ ಇರಬಾರದು. ಘಟಕದ ಆವರಣದ ಒಳಗೆ ಬರುವಾಗ ಮತ್ತು ಹೊರಗೆ ಹೋಗುವಾಗ ಭದ್ರತಾ ವಿಭಾಗ / ಅಧಿಕಾರಿಗಳ ತಪಾಸಣೆಗೆ ಒಳಪಡಬೇಕು.

೨೧. ಘಟಕವು ಗುತ್ತಿಗೆದಾರರಿಗೆ ವಹಿಸಿದ ಗುತ್ತಿಗೆಯನ್ನು ಘಟಕದ ಸೂಚನೆಗಳಂತೆ ನಿರ್ವಹಿಸಲು ಗುತ್ತಿಗೆದಾರರು ನಿಯುಕ್ತಿಗೊಳಿಸುವ ಕೆಲಸಗಾರರ ಒಟ್ಟು ಸಂಖ್ಯೆ, ಗುತ್ತಿಗೆ ಅವಧಿ ಬಗ್ಗೆ ಗುತ್ತಿಗೆ ಕಾರ್ಮಿಕ (ನಿಯಂತ್ರಣ ಮತ್ತು ರದ್ಧತಿ) ಕಾಯಿದೆಯಲ್ಲಿ ನಮೂದಿಸಿರುವ ರೀತ್ಯಾ ನಮೂನೆ VI ರಲ್ಲಿ ಗುತ್ತಿಗೆ ಕಾರ್ಮಿಕ ಪರವಾನಗಿಯನ್ನು ಗುತ್ತಿಗೆ ಪಡೆದು ೧೫ ದಿನಗಳೊಳಗೆ ಸಕ್ಷಮ ಪ್ರಾಧಿಕಾರದಿಂದ ಪಡೆದು ಘಟಕಕ್ಕೆ ಸಲ್ಲಿಸಬೇಕು. ನಿಯೋಜಿಸುವ ಕೆಲಸಗಾರರ ಸಂಖ್ಯೆಯಲ್ಲಿ/ ಅವಧಿಯಲ್ಲಿ ಮಾರ್ಪಾಡು ಆದಲ್ಲಿ ಗುತ್ತಿಗೆ ಕಾರ್ಮಿಕ ಪರವಾನಗಿಯಲ್ಲಿ ನಮೂದಿಸಿರುವ ಕೆಲಸಗಾರರ ಸಂಖ್ಯೆಯು ಘಟಕದಲ್ಲಿ ಸಂಬಂಧಿಸಿದ ಗುತ್ತಿಗೆದಾರರ ಅಡಿಯಲ್ಲಿ ಕೆಲಸ ನಿರ್ವಹಿಸುವ ಗುತ್ತಿಗೆ ಕೆಲಸಗಾರರ ಒಟ್ಟು ಸಂಖ್ಯೆಗೆ ಎಲ್ಲಾ ಸಂದರ್ಭಗಳಲ್ಲಿ ತಪ್ಪದೇ ತಾಳೆಯಾಗಬೇಕು ಅದರಂತೆ ಕಾರ್ಮಿಕ ಪರವಾನಿಗಿಯಲ್ಲಿ ಅಗತ್ಯ ತಿದ್ದುಪಡಿಗಳನ್ನು ಸಂಬಂಧಿಸಿದ ಇಲಾಖೆಯಿಂದ ಮಾಡಿಸಿ ಘಟಕಕ್ಕೆ ಅದರ ಪ್ರತಿ ಸಲ್ಲಿಸಬೇಕು. ಗುತ್ತಿಗೆ ಅವಧಿ ಮುಗಿದ ನಂತರ ಕಾರ್ಮಿಕ ಇಲಾಖೆಗೆ ನಿಯಮಾನುಸಾರ ತಿಳಿಸುವ ಜವಾಬ್ದಾರಿ ಗುತ್ತಿಗೆದಾರರದ್ದಾಗಿರುತ್ತದೆ.

೨೨. ಗುತ್ತಿಗೆ ಪಡೆದ ಟೆಂಡರುದಾರರು ತಾವು ವಹಿಸಿಕೊಳ್ಳುವ ಜವಾಬ್ದಾರಿ ಮತ್ತು ಬಾಧ್ಯತೆಗಳನ್ನು ಘಟಕದ ಅವಶ್ಯತೆಗಳಿಗನುಣವಾಗಿ ಕೆಲವು ಕೆಲಸಗಳಿಗೆ ವಾರದ ರಜೆ ಮತ್ತು ಸಾರ್ವತ್ರಿಕ ರಜಾ ದಿನಗಳು ಒಳಗೊಂಡಂತೆ ಎಲ್ಲಾ ದಿನಗಳಿಗೂ ಹಾಗೂ ಕೆಲವು ಕೆಲಸಗಳಿಗೆ ಕಛೇರಿ ತುರ್ತು ದಿನಗಳಂದು ಮಾತ್ರ ಒದಗಿಸುವ ಗುತ್ತಿಗೆ ಕಾರ್ಮಿಕರು 7 ನೇ ತರಗತಿಯಲ್ಲಿ ಉತ್ತೀರ್ಣರಾಗಿದ್ದು ಕನ್ನಡ ತಿಳಿದಿರಬೇಕು. ಸಿಬ್ಬಂದಿಯು ಕನಿಷ್ಠ ೫ ಅಡಿ ೫ ಇಂಚು ಎತ್ತರವಿದ್ದು ದೈಹಿಕವಾಗಿ ಸಮರ್ಥರಾದ ೨೫ ರಿಂದ ೫೦ ವಯೋಮಾನದ ಆರೋಗ್ಯವಂತ ಕೆಲಸಗಾರರನ್ನು ನಿಯುಕ್ತಿಗೊಳಿಸಿ ಎಲ್ಲಾ ಪಾಳಿಗಳಲ್ಲಿ ಉಸ್ತುವಾರಿ ಮಾಡಲು ಮತ್ತು ಮತ್ತು ಘಟಕದ ವಿವಿಧ ಪಾಳಿಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಕೆಲಸಗಾರರನ್ನು ನಿಯಂತ್ರಿಸಲು ಗುತ್ತಿಗೆದಾರರ ಜವಬ್ದಾರಿ ಹಾಗೂ ವೆಚ್ಚದಲ್ಲಿ ಅರ್ಹ ಸಮರ್ಥ ಮತ್ತು ನುರಿತ ಮೇಲ್ವಿಚಾರಕರನ್ನು ಹೊಂದಿರಬೇಕು. ಇವರುಗಳು ಕೆಲಸಗಾರರು ಕೆಲಸಕ್ಕೆ ಹಾಜರಾಗುವ ಸಮಯ ಮತ್ತು ಕೆಲಸ ಮುಗಿಸಿ ಹೊರಗೆ ಹೋಗುವ ನಿಯೋಜಿಸುವ ಬಗ್ಗೆ ನಿಗಾ ಇಡಬೇಕು ಹಾಗೂ ಶಾಸನಬದ್ಧ ಕಟಾವಣೆಗಳ ಪಾವತಿಯ ಬಗ್ಗೆ ಜವಾಬ್ದಾರರಾಗಿ ಅಗತ್ಯ ವಿವರಗಳನ್ನು ಒದಗಿಸುವುದು ಅಗತ್ಯವಾದಾಗ ಪಾಳಿಯ ಸಮಯ ಬದಲಾಗಬಹುದು ಅಲ್ಲದೆ ಕೆಲವು ಕೆಲಸಗಳನ್ನು ಕೆಲಸಕ್ಕೆ ಅನುಗುಣವಾಗಿ ಸ್ಪ್ಲಿಟ್ ಹವರ್ Split Hour) ನಲ್ಲಿ ಕಾರ್ಯ ನಿರ್ವಹಿಸಬೇಕಾಗಿರುತ್ತದೆ. ಈ ಬಗ್ಗೆ ಕಾಲ ಕಾಲಕ್ಕೆ ಘಟಕವು ನೀಡುವ ಸೂಚನೆಗಳನ್ನು ಪಾಲಿಸುವುದು.

೨೩. ಘಟಕದಿಂದ ಪಡೆದ ಉಪಕರಣ ಸಲಕರಣೆಗಳನ್ನು ಸುರಕ್ಷಿತವಾಗಿಟ್ಟು ಸೂಚಿಸಿದಾಗ ಪರಿಶೀಲನೆಗೆ ಹಾಜರುಪಡಿಸಬೇಕು ಮತ್ತು ಗುತ್ತಿಗೆ ಅವಧಿ ಮುಗಿದ ನಂತರ ಹಿಂದಿರುಗಿಸಬೇಕು. ಒಪ್ಪಂದದಡಿಯಲ್ಲಿ ಗುತ್ತಿಗೆದಾರರಿಗೆ ಇರುವ ಬಾಧ್ಯತೆಗಳನ್ನು ಯಾವುದೇ ಸಮಯದಲ್ಲಿ ಪೂರೈಸಲು ಗುತ್ತಿಗೆದಾರರು ವಿಫಲರಾದಲ್ಲಿ ಅಥವಾ ಗುತ್ತಿಗೆದಾರರು ಒಪ್ಪಂದದಂತೆ ನಿಗದಿಪಡಿಸಿದ

ಕೆಲಸಕಾರ್ಯಗಳನ್ನು ಷರತ್ತಿಗನುಗುಣವಾಗಿ ನಿರ್ವಹಿಸಲು ವಿಫಲರಾದಲ್ಲಿ ಅಥವಾ ಗುತ್ತಿಗೆದಾರರು ಯಾವುದೇ ಮುಂಚಿತ ನೋಟೀಸ್ ನೀಡದೆ ಗುತ್ತಿಗೆ ನಿರ್ವಹಿಸುವುದನ್ನು ನಿಲ್ಲಿಸಿದಲ್ಲಿ ಅಥವಾ ಗುತ್ತಿಗೆಯ ಷರತ್ತು ಮತ್ತು ನಿಬಂಧನೆಗಳ ಉಲ್ಲಂಘನೆಗಾಗಿ ಅಥವಾ ತೃಪ್ತಿಕರ ಸೇವೆ ಒದಗಿಸದ ಪ್ರಯುಕ್ತ ಘಟಕದ ಗುತ್ತಿಗೆಯನ್ನು ರದ್ದುಪಡಿಸಿದ್ದಲ್ಲಿ ಅಥವಾ ಗುತ್ತಿಗೆಯ ಅವಧಿಯಲ್ಲಿ ಕರಾರಿನ ನಿರಾಕರಣೆ ಮಾಡಿದಲ್ಲಿ ಘಟಕದ ಇತರೇ ಹಕ್ಕುಗಳಿಗೆ ಬಾಧಕವಾಗದ ರೀತಿಯಲ್ಲಿ ಬೇರೆ ಏಜೆನ್ಸಿಯ ಮೂಲಕ ಬದಲಿ ವ್ಯವಸ್ಥೆ ಕೈಗೊಳ್ಳಲು ಅಧಿಕಾರ ಹೊಂದಿದ್ದು ಇದಕ್ಕೆ ತಗಲುವ ವೆಚ್ಚ ಒಳಗೊಂಡು ಘಟಕಕ್ಕೆ ಆಗುವ ನಷ್ಟದ ಮೊತ್ತ ಬರಬೇಕಾದ ಯಾವುದೇ ಬಾಕಿ ಗುತ್ತಿಗೆದಾರರ ವಿರುದ್ಧ ನಿರ್ಧರಿಸಲಾದ ನಿಗದಿತ ಹಾನಿ ಪರಿಹಾರ (Liquidated damages) ವನ್ನು ಸೂಕ್ತ ದಂಡದೊಂದಿಗೆ ಗುತ್ತಿದಾರರ ಬಾಕಿ ಇರುವ ಬಿಲ್ಲುಗಳ ಮೊತ್ತದಿಂದ ಮತ್ತು ಅವಶ್ಯಕತೆ ಇದ್ದಲ್ಲಿ ಭದ್ರತಾ ಠೇವಣಿಯಿಂದ ಕಟಾಯಿಸಲಾಗುವುದು.

೨೪. ಗುತ್ತಿಗೆ ಅವಧಿ ಮುಕ್ತಾಯಗೊಂಡ ಅಥವಾ ಗುತ್ತಿಗೆ ರದ್ದುಗೊಂಡ ಎರಡು ತಿಂಗಳ ನಂತರ ಘಟಕಕ್ಕೆ ಬರಬೇಕಾದ ಬಾಕಿಗಳನ್ನು ಮತ್ತು ಆಗಿರಬಹುದಾದ ನಷ್ಟವನ್ನು ನಗದು ರೂಪದಲ್ಲಿ ಇಟ್ಟಿರುವ ಭದ್ರತಾ ಠೇವಣಿಯಲ್ಲಿ ಅಥವಾ ಭದ್ರತಾ ಠೇವಣಿಯಾಗಿ ನೀಡಿದ ಬ್ಯಾಂಕ್ ಗ್ಯಾರಂಟಿಯನ್ನು ನಗದೀಕರಿಸಿ ಸದರಿ ಮೊತ್ತದಿಂದ ಕಟಾಯಿಸಿ ಲೆಕ್ಕ ಹೊಂದಾಣಿಕೆ ಮಾಡಿಕೊಂಡು ಉಳಿಕೆ ಭದ್ರತಾ ಠೇವಣಿಯ ಮೊತ್ತವನ್ನು ಬಡ್ಡಿರಹಿತವಾಗಿ ಹಿಂದಿರುಗಿಸಲಾಗುವುದು.

೨೫. ಕರಾರಿನ ಯಾವುದೇ ಷರತ್ತು ಮತ್ತು ನಿಬಂಧನೆಗಳನ್ನು ಅಥವಾ ಇಡೀ ಒಪ್ಪಂದವನ್ನು ಪಾಲಿಸದಿದ್ದಲ್ಲಿ / ಪೂರೈಸದಿದ್ದಲ್ಲಿ ನಷ್ಟ ಭರ್ತಿ ಹಾಗೂ ಹಾನಿ ಪರಿಹಾರ (Liquidated damages) ದಂಡವನ್ನು ಪಾವತಿಸದಿದ್ದಲ್ಲಿ ಭದ್ರತಾ ಠೇವಣಿಯನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

೨೬. ಗುತ್ತಿಗೆ ಅವಧಿಯಲ್ಲಿ ಘಟಕಕ್ಕೆ ಯಾವುದೇ ರೀತಿಯ ನಷ್ಟ/ ಹಾನಿ ಉಂಟಾದಲ್ಲಿ ಹಾಗೂ ಗುತ್ತಿಗೆಗೆ ಸಂಬಂಧಿಸಿದ ಕೆಲಸಗಳಿಂದಾಗಿ ಉದ್ಭವಿಸಬಹುದಾದ ಯಾವುದೇ ಬೇಡಿಕೆಯು(Claims) ಯಾರಿಂದಲಾದರೂ ಘಟಕಕ್ಕೆ ಬಂದಲ್ಲಿ ಅದರಿಂದಾಗುವ ನಷ್ಟ/ಹಾನಿ ಭರ್ತಿ (Indemnify) ಮಾಡಿಕೊಡಲು ಗುತ್ತಿಗೆದಾರರು ಬದ್ಧರಿರುತ್ತಾರೆ. ಈ ಗುತ್ತಿಗೆ ಅಸ್ತಿತ್ವದಲ್ಲಿರುವಾಗ ಗುತ್ತಿಗೆದಾರಾರು ಪ್ರತ್ಯಕ್ಷವಾಗಿಯಾಗಲಿ, ಪರೋಕ್ಷವಾಗಿಯಾಗಲಿ, ಸ್ವ ಇಚ್ಛೆಯಿಂದಾಗಲಿ ಅಥವಾ ಅನೈಚ್ಛಿಕವಾಗಿಯಾಗಲಿ ಕೈಗೊಳ್ಳುವ ಎಲ್ಲಾ ಕೃತ್ಯಗಳು ಅಥವಾ ಕಾರ್ಯಗಳು ಅಥವಾ ವಿಷಯಗಳು ಅಲ್ಲದೆ ವಿಫಲತೆಯಿಂದ ಅಥವಾ ನಿರ್ಲಕ್ಷದಿಂದ ಅಥವಾ ದುರ್ನಡತೆಯಿಂದ ಕೆಲಸ ಮಾಡುವುದು ಅಥವಾ ಮಾಡದಿರುವುದು (Commission as well as omission) ಇವುಗಳಿಂದ ಉಂಟಾಗುವ ಎಲ್ಲಾ ಕೃತ್ಯಗಳು ಅಥವಾ ಕಾರ್ಯಗಳು ಅಥವಾ ವಿಷಯಗಳು ಇವುಗಳ ದೆಸೆಯಿಂದ ಆಗುವ ನಷ್ಟವನ್ನು ಘಟಕಕ್ಕೆ ಭರ್ತಿ ಮಾಡಿಕೊಡಬೇಕು.

೨೭. ಗುತ್ತಿಗೆ ಕಾರ್ಮಿಕರ ಕೆಲಸದ ಪರಿಮಾಣವು ಘಟಕದ ಅವಶ್ಯಕತೆಯ ಮೇರೆಗೆ ವ್ಯತ್ಯಾಸವಾಗಬಹುದು ಅದಕ್ಕೆ ಅನುಗುಣವಾಗಿ ಗುತ್ತಿಗೆ ಕಾರ್ಮಿಕರನ್ನು ಒದಗಿಸಬೇಕಾಗುತ್ತದೆ.

೨೮. ಘಟಕದಿಂದ ಗುತ್ತಿಗೆದಾರರಿಗೆ ನೀಡಬೇಕಾದ ಪತ್ರಗಳನ್ನು ಗುತ್ತಿಗೆದಾರರ ಮೇಲ್ವಿಚಾರಕರ ಮೂಲಕ ಅಥವಾ ಗುತ್ತಿಗೆದಾರರು ನೀಡಿರುವ ವಿಳಾಸಕ್ಕೆ ಅಂಚೆ ಮೂಲಕ ರವಾನಿಸಲಾಗುವುದು. ಈ ರೀತಿ ಪತ್ರಗಳನ್ನು ರವಾನಿಸಿದಾಗ ಅದನ್ನು ಪತ್ರಗಳ ಸಮರ್ಪಕ ಬಟಾವಡೆ (Deemed service) ಎಂದು ಪರಿಗಣಿಸಲಾಗುವುದು. ಆದ್ದರಿಂದ ಒಂದು ವೇಳೆ ವಿಳಾಸದಲ್ಲಿ ಬದಲಾವಣೆ ಆದಲ್ಲಿ ಅದನ್ನು ಗುತ್ತಿಗೆದಾರರು ಲಿಖಿತವಾಗಿ ಕೂಡಲೇ ಘಟಕಕ್ಕೆ ತಿಳಿಸಬೇಕು

೨೯. ಗುತ್ತಿಗೆಯ ನಿರ್ವಹಣೆಯಲ್ಲಿ ಯಾವುದೇ ಭಿನ್ನಾಭಿಪ್ರಾಯ ಉಂಟಾದಲ್ಲಿ ಅಥವಾ ಒಪ್ಪಂದದ ಉಪಬಂಧಗಳನ್ನು ಅರ್ಥೈಸುವಲ್ಲಿ ಯಾವುದೇ ಅನುಮಾನ ಉಂಟಾದಲ್ಲಿ ಘಟಕದ ನಿರ್ದೇಶಕರ ತೀರ್ಮಾನವೆ ಅಂತಿಮವಾಗಿದ್ದು ಅದಕ್ಕೆ ಗುತ್ತಿಗೆದಾರರು ಬದ್ಧರಿರಬೇಕು.

೩೦. ಟೆಂಡರುದಾರರು ಗುತ್ತಿಗೆಗೆ ಸಂಬಂಧಿಸಿದ ಷರತ್ತು ನಿಬಂಧನೆಗಳನ್ನು ಉಲ್ಲಂಘಿಸಿದಲ್ಲಿ ಸೂಕ್ತ ಹಣ ದಂಡ ವಿಧಿಸುವ ಹಾಗು ಗುತ್ತಿಗೆಯನ್ನು ರದ್ದುಪಡಿಸಿ ಭದ್ರತಾ ಠೇವಣಿಯನ್ನು ಮುಟ್ಟುಗೋಲು ಹಾಕಿಕೊಳ್ಳುವ ಹಕ್ಕನ್ನು ಘಟಕದ ಮುಖ್ಯಸ್ಥರು ಹೊಂದಿರುತ್ತಾರೆ.

31. ಗುತ್ತಿಗೆ ನೌಕರರು ಪ್ರತಿದಿನ ಕೆಲಸಕ್ಕೆ ಹಾಜರಾಗುವಾಗ ಘಟಕದ ಭದ್ರತಾ ಶಾಖೆಯಲ್ಲಿ ಭದ್ರತಾ ತಪಾಸಣೆಗೆ ಒಳಪಡಿಸಬೇಕು.

32. ಗುತ್ತಿಗೆದಾರರು ತಮ್ಮ ಗುತ್ತಿಗೆ ಕಾರ್ಮಿಕರಿಗೆ ಇ.ಎಸ್.ಐ ಬದಲು ವಿಮಾ ಪಾಲಿಸಿ (Insurance policy) ಯನ್ನು ಕಡ್ಡಾಯವಾಗಿ ಮಾಡಿಸತಕ್ಕದ್ದು.

33. ಪಿ.ಎಫ್ ವಂತಿಕೆಯನ್ನು ಆನ್ ಲೈನ್‌ನಲ್ಲಿ ಘಟಕದಲ್ಲಿ ಪರಿಶೀಲಿಸಲು ಗುತ್ತಿಗೆದಾರರು ವ್ಯವಸ್ಥೆ ಮಾಡುವುದು.

34. ಗುತ್ತಿಗೆ ಕಾರ್ಮಿಕರನ್ನು ಕಾರ್ಯ ನಿರ್ವಹಣೆಯ ಬಗ್ಗೆ ಗುತ್ತಿಗೆದಾರರು ಕಾಲ ಕಾಲಕ್ಕೆ ಕನಿಷ್ಠ ತಿಂಗಳಿಗೆ ಒಂದು ಬಾರಿ ಮೇಲ್ವಿಚಾರಣೆ ನಡೆಸಿ ವಿಭಾಗಾಧಿಕಾರಿಗಳ ಗಮನಕ್ಕೆ ಲಿಖಿತವಾಗಿ ಕೂಡಲೆ ವಿಳಂಬವಿಲ್ಲದೆ ತಿಳಿಸತಕ್ಕದ್ದು.

35. ಗುತ್ತಿಗೆದಾರರು ಮತ್ತು ಘಟಕಕ್ಕೆ ಯಾವುದೇ ಭಿನ್ನಾಭಿಪ್ರಾಯ, ವ್ಯಾಜ್ಯ ಉಂಟಾದಲ್ಲಿ ಅವುಗಳನ್ನು ಮಧ್ಯಸ್ಥದಾರರ ಮೂಲಕ ಇತ್ಯರ್ಥಗೊಳಿಸತಕ್ಕದ್ದು. ಮಧ್ಯಸ್ಥದಾರರನ್ನು ಘಟಕದ ನಿರ್ದೇಶಕರು ಇವರು ನೇಮಿಸುವ ಅಧಿಕಾರವನ್ನು ಹೊಂದಿರುತ್ತಾರೆ.

36. ಕ್ರ.ಸಂ.34 ಕ್ಕೆ ಒಳಪಟ್ಟು ಯಾವುದೇ ವ್ಯಾಜ್ಯಕ್ಕೆ ಸಂಬಂಧಿಸಿದಂತೆ ಘಟಕದ ವ್ಯಾಪ್ತಿಯ ನ್ಯಾಯಾಲಯದಲ್ಲಿ ಮಾತ್ರ ದಾವೆ ಹೂಡಬಹುದಾಗಿದೆ.

ನಿರ್ದೇಶಕರು
ನಂದಿನಿ ಹೈಟೆಕ್ ಪ್ರಾಡಕ್ಟ್ ಪ್ಲಾಂಟ್ ಬರಾಪ ಪರವಾಗಿ

ಗೆ: ಮೆ: ಆಲ್ಸ್ಟಾರ್ ಎಂಟರ್ ಪ್ರೈಸಸ್, ನಂ. ೩ನೇ ಕ್ರಾಸ್,
ಮಕ್‌ರಾಜ್ ಬಡಾವಣೆ ಬನ್ನೇರುಘಟ್ಟ ರಸ್ತೆ,
ಬೆಂಗಳೂರು -೫೬೦ ೦೩೦

ಪ್ರತಿ: 1. ವ್ಯವಸ್ಥಾಪಕರು (ಡೇರಿ) /(ಅಭಿ) ಬರಾಪ ರವರ ಮಾಹಿತಿಗಾಗಿ
2. ಉಪ ವ್ಯವಸ್ಥಾಪಕರು (ಗು.ನಿ/ಯು.ಹೆಚ್.ಟಿ) ಬರಾಪ ರವರ ಮಾಹಿತಿಗಾಗಿ
3. ಅಧೀಕ್ಷಕರು (ವಿತ್ತ) ಬರಾಪ ರವರ ಮಾಹಿತಿಗಾಗಿ
4. ಕಛೇರಿ ಪ್ರತಿ



ಅನುಬಂಧ -1



# ನಂದಿನಿ ಹೈಟೆಕ್ ಪ್ರಾಡಕ್ಟ್ ಪ್ಲಾಂಟ್ ಶೆಟ್ಟಿಹಳ್ಳಿ ಚನ್ನರಾಯಪಟ್ಟಣ

ಸಂಖ್ಯೆ: ಕಹಾಮ :ನಹೈಪ್ರಾಪ್ಲಾ/ಚರಾಪ/ಗು.ಕಾ/2019 / 1086 ದಿನಾಂಕ:01.08.2019

## ಗುತ್ತಿಗೆ ಕಾರ್ಯಾದೇಶ

ವಿಷಯ: ಘಟಕದಲ್ಲಿ ಉತ್ಪಾದನೆಯೇತರ ಪ್ರದೇಶದ ಕೆಲಸಗಳನ್ನು ನಿರ್ವಹಿಸಲು ಗುತ್ತಿಗೆ ಕಾರ್ಮಿಕರನ್ನು ಒದಗಿಸುವ ಬಗ್ಗೆ

ಉಲ್ಲೇಖ 1. ಟೆಂಡರ್ ಪ್ರಕಟಣೆ ಸಂಖ್ಯೆ:KMF/NHPP/ADMIN /L.T/001/2018-19
2. ವಾಣಿಜ್ಯ ಟೆಂಡರ್ ತೆರೆದ ದಿನಾಂಕ: 30.05.2019 ಸಬಾ ನಡಾವಳಿ
3. ದರ ಸಂಧಾನ ನಡೆದ ದಿನಾಂಕ:04.06.2019ರ ಸಮಿತಿ ಸಭೆಯ ನಡಾವಳಿ
4. ಒಪ್ಪಿಗೆ ಪತ್ರ ಸಂಖ್ಯೆ: KMF/NHPP-CRP/PUR/Tender Doc/LabourTender/2019-20/756D:28.6.2019
5. ಕರಾರು ಪತ್ರ ದಿನಾಂಕ: 31.07.2019

- - - - -

ಕಹಾಮ ನಂದಿನಿ ಹೈಟೆಕ್ ಪ್ರಾಡಕ್ಟ್ ಪ್ಲಾಂಟ್ ಇಲ್ಲಿಗೆ ಉತ್ಪಾದನೆ ಮತ್ತು ಸ್ವಚ್ಛತಾ ಕೆಲಸಗಳ ನಿರ್ವಹಣೆಗೆ ಗುತ್ತಿಗೆ ಆಧಾರದ ಮೇಲೆ ಕಾರ್ಮಿಕರನ್ನು ನೀಡುವ ಕುರಿತಂತೆ ಸಲ್ಲಿಸಲಾದ ಉಲ್ಲೇಖ (1) ಟೆಂಡರ್ ಹಾಗೂ ಉಲ್ಲೇಖ ( 5) ರ ಕರಾರು ಪತ್ರ ಇವುಗಳನ್ನು ಪರಿಗಣಿಸಿ, ದಿನಾಂಕ:01.07.2019 ರಿಂದ 31.06.2021 ವರೆಗೆ ಎರಡು ವರ್ಷಗಳ ಅವಧಿಗೆ ಕರಾರು ಪತ್ರದಲ್ಲಿ ಒಪ್ಪಿರುವಂತೆ ಈ ಕೆಳಗೆ ನಮೂದಿಸಿರುವ ದರಗಳಲ್ಲಿ ಮತ್ತು ನಿಬಂಧನೆ ಹಾಗೂ ಷರತ್ತಿಗೊಳಪಟ್ಟು ಗುತ್ತಿಗೆ ಆಧಾರದ ಮೇಲೆ ಕಾರ್ಮಿಕರನ್ನು ಒದಗಿಸಿ ವಿವಿಧ ಗುತ್ತಿಗೆ ಕೆಲಸಗಳನ್ನು ನಿರ್ವಹಿಸಲು ಈ ಮೂಲಕ ಆದೇಶಿಸಿದೆ.

| ಕ್ರ. ಸಂ | ವಿವರ | ನುರಿತರಲ್ಲದ ಕಾರ್ಮಿಕರು | ಅಡುಗೆ ಭಟ್ಟರು | ಸ್ವಚ್ಛತಗಾರರು/ ಸಹಾಯಕ/ಕರ್ಮಚಾರಿಗಳು |
|---|---|---|---|---|
| 1 | ಪ್ರತಿ ಮಾಹೆಯ ವೇತನ | ರೂ.10885.60 | ರೂ.12575.60 | ರೂ.14525.60 |
| 2 | ಉದ್ಯೋಗದಾತರ ಪಿ.ಎಫ್ ಬಾಬ್ತು ಶೇ. 13.00 ಇ.ಎಸ್.ಐ. ಬಾಬ್ತು ಶೇ.3.25 | ರೂ.1768.91 | ರೂ.2043.54 | ರೂ.2360.41 |
| 3 | ಗಳಿಕೆ ರಜೆಯ ಬಾಬ್ತು=18.25xಪ್ರತಿ ದಿನದ ವೇತನ/ 365 ಹಾಗೂ ಸಾರ್ವಜನಿಕ ರಜೆ ಬಾಬ್ತು=10ದಿನ xಪ್ರತಿ ದಿನದ ವೇತನ/ 365 | ರೂ. 842.52 | ರೂ. 973.32 | ರೂ. 1124.24 |
| 4 | ಗುತ್ತಿಗೆದಾರರಿಗೆ ನೀಡುವ ಮೊತ್ತ | ರೂ. 13497.03 | ರೂ. 15592.46 | ರೂ. 18010.25 |
| 5 | ಉದ್ಯೋಗಿಯ ಪಿ.ಎಫ್, ಇ.ಎಸ್.ಐ. ಬಾಬ್ತು | ರೂ. 1387.91 | ರೂ. 1603.39 | ರೂ. 1852.25 |
| 6 | ಕಾರ್ಮಿಕರಿಗೆ ನೀಡುವ ಮೊತ್ತ ಪ್ರತಿ ಮಾಹೆಗೆ | ರೂ.10340.20 | ರೂ. 11945.53 | ರೂ. 13797.83 |
| 7 | ಗುತ್ತಿಗೆ ದಾರರಿಗೆ ನೀಡುವ ಮೊತ್ತ ಪ್ರತಿ ದಿನಕ್ಕೆ | ರೂ. 519.12 | ರೂ. 599.71 | ರೂ. 692.70 |
| 8 | ಕಾರ್ಮಿಕರಿಗೆ ನೀಡುವ ಮೊತ್ತ ಪ್ರತಿ ದಿನಕ್ಕೆ | ರೂ. 397.70 | ರೂ. 459.44 | ರೂ. 530.68 |
| 9 | ಸೇವಾ ಶುಲ್ಕ = ಕ್ರಸಂ. 4 x ಸೇವಾ ಶುಲ್ಕ ಅನ್ವಯಿಸುತ್ತದೆ. | 0.01% | 0.01% | 0.01% |
| 10 | ಒಟ್ಟು ಮೊತ್ತ ಕ್ರಸಂ. (4+9) | | | |
| 11 | G.S.T ಕ್ರಸಂ. 10 x G.S.T ಅನ್ವಯವಾಗುವಂತೆ (ಶೇ. 18 %) | | | |

ರವಾನಿಸಲಾಗಿದೆ 1086
06/08/19

06/08
6/8/19

ಘಟಕದ ವಿವಿಧ ಕೆಲಸಗಳನ್ನು ಭಾಗ-ಬಿ ಭಾಗದಲ್ಲಿ ವಿಂಗಡಿಸಿ ಪ್ರತಿ ದಿನಕ್ಕೆ 3 ಪಾಳಿಗಳ ಕೆಲಸಗಳಿಗೆ ಬೇಕಾದ ಕಾರ್ಮಿಕರ ಸಂಖ್ಯೆಯನ್ನು ಈ ಕೆಳಕಂಡ ಕೋಷ್ಟಕದಂತೆ ನಿಗಧಿಪಡಿಸಲಾಗಿದೆ.

| ಭಾಗ – ಬಿ | | | |
|---|---|---|---|
| ಕ್ರ.ಸಂ. | ಕೆಲಸದ ಪ್ರಕಾರ ಮತ್ತು ಸ್ಥಳ | ನುರಿತರಲ್ಲದವರ ಕಾರ್ಮಿಕರ ಸಂಖ್ಯೆ | ಅಡುಗೆ ಭಟ್ಟರು. |
| 1 | ಆಡಳಿತ / ನಿರ್ದೇಶಕರ ಕಛೇರಿ | 2 | |
| 2 | ಉಗ್ರಾಣ ವಿಭಾಗ | 2 | |
| 3 | ಖರೀದಿ ವಿಭಾಗ | 1 | |
| 4 | ಎಫ್.ಜಿ.ಎಸ್. ವಿಭಾಗ | 2 | |
| 5 | ಸಿಸ್ಟಂ ವಿಭಾಗ | 1 | |
| 6 | ವಿತ್ತ ವಿಭಾಗ | 1 | |
| 7 | ಉತ್ಪಾದನೆ / ಅಭಿಯಂತರ ಕಛೇರಿ | 2 | |
| 8 | ಐ.ಎಸ್.ಓ. ಸ್ವಚ್ಛತೆ ಕೆಲಸ | 6 | |
| 9 | ಬಾಯ್ಲರ್ ವಿಭಾಗ | 3 | |
| 10 | ನಿರ್ವಹಣೆ ವಿಭಾಗ | 3 | |
| 11 | ಶೀಥಲೀಕರಣ ವಿಭಾಗ | 3 | |
| 12 | ವಿದ್ಯುತ್ ವಿಭಾಗ | 4 | |
| 13 | ಗಣ್ಣಿಕಡ ಪಂಪ್ ಹೌಸ್ | 1 | |
| 14 | ತೋಟಗಾರಿಕೆ | 8 | |
| 15 | ಉಪಹಾರ ಗೃಹ | 9 | 3 |
| | ಒಟ್ಟು | 48 | 3 |

ಘಟಕದ ಉತ್ಪಾದನೆಗೆ ಅನುಗುಣವಾಗಿ 3 ಪಾಳಿಗಳನ್ನು ಒಳಗೊಂಡಂತೆ ಅವಶ್ಯಕತೆಗನುಗುಣವಾಗಿ ಕಾರ್ಮಿಕರನ್ನು ಪಡೆಯಲಾಗುವುದು.

**ಷರತ್ತು ಮತ್ತು ನಿಬಂಧನೆಗಳು:**

**1.0 ಗುತ್ತಿಗೆಯ ಸಂಧುತ್ವ:**

1. ಗುತ್ತಿಗೆಯ ಅವಧಿಯು ಕರಾರಿನಂತೆ ಕೆಲಸದ ಆದೇಶ ಜಾರಿಗೆ ಬರುವ ದಿನಾಂಕದಿಂದ ಎರಡು ವರ್ಷಗಳ ಅವಧಿಗೆ ಜಾರಿಯಲ್ಲಿರುತ್ತದೆ.
2. ಕರಾರನ್ನು ಸಹಿ ಮಾಡಿದ ಮತ್ತು ನಿಗದಿಪಡಿಸಿದ ಭದ್ರತಾ ಠೇವಣಿಯನ್ನು ಬ್ಯಾಂಕ್ ಗ್ಯಾರಂಟಿ ರೂಪದಲ್ಲಿ ಕರ್ನಾಟಕ ಬ್ಯಾಂಕ್, ಬೆಂಗಳೂರು ಇಲ್ಲಿ ರೂ. 29,58,000/-ಗಳನ್ನು ದಿನಾಂಕ:28.06.2019 ರಂದು ಸಲ್ಲಿಸಿದ್ದು, ನಂದಿನಿ ಹೈಟೆಕ್ ಪ್ರಾಡಕ್ಟ್ ಪ್ಲಾಂಟ್ ಘಟಕವು ಹೊರಡಿಸುವ ಆದೇಶದ ದಿನಾಂಕದಿಂದ ಗುತ್ತಿಗೆಯು ಪ್ರಾರಂಭವಾಗುವುದು.
3. ಗುತ್ತಿಗೆ ಅವಧಿಯು ಮುಕ್ತಾಯಗೊಂಡ ನಂತರ ವಿವೇಚನೆಯ ಮೇರೆಗೆ ಪ್ರಸ್ತುತ ಗುತ್ತಿಗೆ ಷರತ್ತಿಗೆ ಒಳಪಟ್ಟು ಹಾಲಿ ಚಾಲ್ತಿಯಲ್ಲಿರುವ ದರದಲ್ಲಿಯೇ ಗುತ್ತಿಗೆ ಅವಧಿಯನ್ನು 90 ದಿನಗಳ ಅವಧಿಗೆ ವಿಸ್ತರಿಸುವ ಅಧಿಕಾರವನ್ನು ನಿರ್ದೇಶಕರು ಬರಾಪ ರವರು ಹೊಂದಿರುತ್ತಾರೆ.

**2.0 ಗುತ್ತಿಗೆ ದರ :**

1. ವಿಸ್ತರಿಸಿದ ಅವಧಿ ಒಳಗೊಂಡು ಗುತ್ತಿಗೆ ಅವಧಿಯಲ್ಲಿ ಗುತ್ತಿಗೆ ದರವು ಕ್ರಮ ಸಂಖ್ಯೆ2 ಮತ್ತು 3 ಕ್ಕೆ ಒಳಪಟ್ಟು ಯಾವುದೆ ಹೆಚ್ಚಳ/ ಇಳಿಕೆ ಇಲ್ಲದೆ ಸ್ಥಿರವಾಗಿ ಇರುತ್ತದೆ.
2. ಒಪ್ಪಂದದ ಪ್ರಕಾರ ಪೂರ್ಣವಾಗಿ ಮತ್ತು ತೃಪ್ತಿಕರವಾಗಿ ನಿರ್ವಹಿಸಿದ ಕೆಲಸಕ್ಕೆ ಬಿಲ್ ಮೊತ್ತವನ್ನು ಘಟಕವು ಸಂಬಂಧಪಟ್ಟ ಗುತ್ತಿಗೆದಾರರಿಗೆ ಪಾವತಿಸಲಾಗುವುದು.
3. ಸರ್ಕಾರವು ಗುತ್ತಿಗೆ ಕಾರ್ಮಿಕರಿಗೆ ಕಾಲ ಕಾಲಕ್ಕೆ ಪರಿಷ್ಕರಿಸುವ ಕನಿಷ್ಠ ವೇತನ ಮತ್ತು ತುಟ್ಟಿ ಭತ್ಯೆಯ ಹೆಚ್ಚುವರಿ ಮೊಬಲಗನ್ನು PF.ESIಗಳಿಗೆ ಸಂಬಂಧಿಸಿದಂತೆ ಗುತ್ತಿಗೆದಾರರ ಹೆಚ್ಚುವರಿ ಭಾಗದೊಂದಿಗೆ ಘಟಕದಿಂದ ಪಾವತಿಸಲಾಗುವುದು. ಗುತ್ತಿಗೆದಾರರು ತಮ್ಮ ಸಿಬ್ಬಂದಿಗೆ ವಾರ್ಷಿಕವಾರು ಬೋನಸ್ ಕಾಯಿದೆಯನ್ವಯ ಬೋನಸ್ ಘೋಷಿಸಿ ಪಾವತಿ ಮಾಡಿದ್ದಾದಲ್ಲಿ ಅದನ್ನು ಕಹಾಮ ಇದರ ಕಾಯ್ದೆ ನಿಯಮಗಳಿಗೆ

ಒಳಪಟ್ಟು ಪುನರಾಭರಣ ಮಾಡಲು ಕ್ರಮವಿಡಲಾಗುವುದು. ಅದಕ್ಕೆ ಪೂರ್ವದಲ್ಲಿ ಗುತ್ತಿಗೆದಾರರು ಬೋನಸ್‌ನ್ನು ಅರ್ಹ ಕಾರ್ಮಿಕರಿಗೆ ನಿಯಮಾನುಸಾರ ಘಟಕದ ಪ್ರತಿನಿಧಿಯ ಸಮ್ಮುಖದಲ್ಲಿ ಪಾವತಿಸುವುದು ಮತ್ತು ಪುಸ್ತಕದಲ್ಲಿ ಈ ದೃಢೀಕರಣ ಪಡೆಯುವುದು.

4. ನಿಯಮಾನುಸಾರ ಪಾವತಿಸುವ ಸೇವಾ ತೆರಿಗೆಯನ್ನು ಘಟಕದಿಂದ ಮರುಪಾವತಿಸಲಾಗುವುದು.

3.0 ಬಿಲ್ ಪಾವತಿ:

1. ಗುತ್ತಿಗೆದಾರರು ಪ್ರತಿ ತಿಂಗಳು ನಿಯೋಜಿಸಿದ ನೌಕರರ ಹಾಗೂ ಇತರೆ ದಾಖಲೆಗಳನ್ನು ಒಳಗೊಂಡ ಬಿಲ್‌ಗಳನ್ನು ಎರಡನೆ ದಿನಾಂಕದೊಳಗಾಗಿ ನಿಗದಿಪಡಿಸಿದ ನಮೂನೆಯಲ್ಲಿ ದ್ವಿಪ್ರತಿಯಲ್ಲಿ ನಿರ್ದೇಶಕರು ನಹ್ಯೆಪ್ರಾಪ್ಲಾ ಚರಾಪ ರವರಿಗೆ ಸಲ್ಲಿಸಬೇಕು. ನಿಬಂಧನೆಗೆ ಅನುಸಾರ ಕೆಲಸವನ್ನು ತೃಪ್ತಿಕರವಾಗಿ ನಿರ್ವಹಿಸಿದ ಬಗ್ಗೆ ಸಂಬಂಧಿಸಿದ ಅಧಿಕಾರಿಗಳ ಪರಿಶೀಲನೆ ಮತ್ತು ದೃಢೀಕರಣದ ಆಧಾರದ ಮೂಲದಲ್ಲಿ ಆದಾಯ ತೆರಿಗೆಯ ~~(TDS) ಕಟಾವಣೆ ಒಳಗೊಂಡು ಎಲ್ಲಾ ಶಾಸನಬದ್ಧ ಕಟಾವಣೆ ಮತ್ತು ಘಟಕಕ್ಕೆ ಬರಬೇಕಾದ ಮೊತ್ತ~~ ಹಾಗೂ ವಿಧಿಸಬಹುದಾದ ದಂಡಗಳ ಕಟಾವಣೆ ಮಾಡಿ ಉಳಿಕೆ ಮೊತ್ತವನ್ನು ಚೆಕ್ ಮುಖೇನ ಗುತ್ತಿಗೆದಾರರಿಗೆ ಪಾವತಿಸಲಾಗುವುದು.
2. ಗುತ್ತಿಗೆದಾರರು ಡಿಮ್ಯಾಂಡ್ ಡ್ರ್ಯಾಫ್ಟ್ ರೂಪದಲ್ಲಿ ಹಣ ಪಡೆಯಲು ಇಚ್ಛಿಸಿದಲ್ಲಿ ತಾವೇ ಸ್ವತ: ಡಿ.ಡಿ. ವೆಚ್ಚವನ್ನು ಭರಿಸಬೇಕಾಗುತ್ತದೆ.
3. ಗುತ್ತಿಗೆದಾರರು ಘಟಕದಲ್ಲಿ ಗುತ್ತಿಗೆಯನ್ನು ನಿರ್ವಹಿಸುವ ಅವಧಿಯಲ್ಲಿ ಘಟಕದಿಂದ ಪಡೆಯುವ ಅಥವಾ ಲಭ್ಯವಾಗುವ ಘಟಕದ ವ್ಯವಹಾರ ನಿರ್ವಹಣೆಗೆ ಸಂಬಂಧಿಸಿದ ಲಿಖಿತ ಮತ್ತು ಮೌಖಿಕ ಮಾಹಿತಿಯನ್ನು ಯಾರಿಗೂ ಬಯಲು ಮಾಡಬಾರದು ಮತ್ತು ಅಂತಹ ಮಾಹಿತಿಯ ರಹಸ್ಯವನ್ನು ಕಾಪಾಡಬೇಕು.
4. ಗುತ್ತಿಗೆ ಅವಧಿಯಲ್ಲಿ ಸರ್ಕಾರವು ಗುತ್ತಿಗೆ ಕಾರ್ಮಿಕರಿಗೆ ನಿಗದಿಪಡಿಸುವ ಹಾಗೂ ಕಾಲಕಾಲಕ್ಕೆ ಪರಿಷ್ಕರಿಸುವ ಕನಿಷ್ಠ ವೇತನ ದರಗಳನ್ನು ಮತ್ತು ತುಟ್ಟಿಭತ್ಯೆಯನ್ನು ಹಾಗೂ ಶಾಸನಬದ್ಧ ಪಾವತಿಗಳನ್ನು ಪಾವತಿಸಲು ಗುತ್ತಿಗೆದಾರರು ಬದ್ಧರಿರಬೇಕು.
5. ಗುತ್ತಿಗೆ ಕೆಲಸಗಾರರಿಂದ ಪ್ರತಿದಿನ 8 ಘಂಟೆಗಳಿಗೂ ಹೆಚ್ಚು ಅವಧಿಯ ಕೆಲಸವನ್ನು ಮಾಡಿಸಬಾರದು. ಕಡ್ಡಾಯವಾಗಿ ವೇತನದೊಂದಿಗೆ ವಾರದ ರಜೆ , ರಾಷ್ಟ್ರೀಯ ಮತ್ತು ಹಬ್ಬಗಳ (ಸಾರ್ವತ್ರಿಕ) ರಜೆ ಹಾಗೂ ಗಳಿಕೆ ರಜೆ ನೀಡಬೇಕು. ಗುತ್ತಿಗೆದಾರರು ಒದಗಿಸುವ ಕೆಲಸಗಾರರಿಗೆ ಭವಿಷ್ಯನಿಧಿ , ನೌಕರರ ರಾಜ್ಯ ವಿಮಾ ವಂತಿಗೆ ಮತ್ತು ಆಡಳಿತಾತ್ಮಕ ವೆಚ್ಚ ಒಳಗೊಂಡು ಎಲ್ಲಾ ಖರ್ಚುಗಳನ್ನು ಭರಿಸಿ ಶಾಸನಾತ್ಮಕ ಸೌಲಭ್ಯಗಳನ್ನು ಒದಗಿಸಬೇಕು. ಗುತ್ತಿಗೆದಾರರು ತಾವು ನಿಯೋಜಿಸುವ ಕೆಲಸಗಾರರಿಗೆ ಬೋನಸ್ ಹಾಗೂ ಉಪಧನ (Gratuity) ಪಾವತಿ ಬಗ್ಗೆ ಕಾನೂನು ಪ್ರಕಾರ ಕ್ರಮ ಕೈಗೊಳ್ಳಲು ಜವಾಬ್ದಾರರಾಗಿರುತ್ತಾರೆ. ಗುತ್ತಿಗೆ ಕೆಲಸಗಾರರ ವಿರುದ್ಧ ಶಿಸ್ತು ಕ್ರಮಕೈಗೊಳ್ಳುವ ಸಂದರ್ಭದಲ್ಲಿ ಸಹಜ ನ್ಯಾಯದ ನಿಯಮಗಳನ್ನು ಗುತ್ತಿಗೆದಾರರು ಅನುಸರಿಸಬೇಕು. ಪ್ರತಿ ತಿಂಗಳ 07 ನೇ ತಾರೀಖಿನ ಮೊದಲು ಗುತ್ತಿಗೆದಾರರು ಘಟಕದಿಂದ ನಾಮನಿರ್ದೇಶನಗೊಂಡ ಅಧಿಕಾರಿಗಳ ಸಮ್ಮುಖದಲ್ಲಿ ಕಾಯ್ದೆಗನುಗುಣವಾಗಿ (ಘಟಕದಿಂದ ಬಿಲ್ ಪಾವತಿ ಆಗದೇ ಇದ್ದರು ಸಹ) ಗುತ್ತಿಗೆ ಸಿಬ್ಬಂದಿಗಳಿಗೆ ಬ್ಯಾಂಕ್ ಖಾತೆಯ ಮೂಲಕ ವೇತನವನ್ನು ಪಾವತಿಸಬೇಕು ಮತ್ತು ವೇತನ ಪುಸ್ತಕದಲ್ಲಿ (ಮಸ್ಟರ್ ರೋಲ್‌ನಲ್ಲಿ ) ಈ ಬಗ್ಗೆ ದೃಢೀಕರಣ ಪಡೆಯಬೇಕು.
6. ಘಟಕದಲ್ಲಿ ಕರ್ತವ್ಯ ನಿರ್ವಹಿಸುವ ಸಂದರ್ಭದಲ್ಲಿ ಸಂಭವಿಸಬಹುದಾದ ಯಾವುದೇ ಅಪಘಾತಗಳಿಂದ ಗುತ್ತಿಗೆದಾರರು ನಿಯೋಜಿಸುವ ಕೆಲಸಗಾರರಿಗೆ ಊನ ಅಥವಾ ಅಂಗಹೀನತೆ ಉಂಟಾದಲ್ಲಿ ಅಥವಾ ಸಾವು ಸಂಭವಿಸಿದಲ್ಲಿ ಹಾಗೂ ಯಾವುದೇ ವೈದ್ಯಕೀಯ ವೆಚ್ಚಗಳಿಗೆ ಗುತ್ತಿಗೆದಾರರೇ ಜವಾಬ್ದಾರರಾಗಿರುತ್ತಾರೆ ಹಾಗೂ ಸಂಬಂಧಿಸಿದ ಕಾನೂನು/ ನಿಯಮಗಳಲ್ಲಿ ಸೂಚಿಸಿದಂತೆ ಈ ಬಗ್ಗೆ ತಗಲುವ ವೆಚ್ಚ / ಸೌಲಭ್ಯಗಳನ್ನು ಮತ್ತು ಪರಿಹಾರವನ್ನು ಪಾವತಿಸಲು ಗುತ್ತಿಗೆದಾರರೇ ಹೊಣೆಯಾಗಿರುತ್ತಾರೆ. ಸಕಾಲಕ್ಕೆ ESI / Insurance ಮುಂತಾದ ಪ್ರಾಧಿಕಾರಗಳಿಗೆ ಅಪಘಾತ ವರದಿ ಮಾಡಲು ಮತ್ತು ಸೂಕ್ತ ಮಾಹಿತಿ ಒದಗಿಸಲು ಜವಾರಾಗಿರುತ್ತಾರೆ.
7. ಗುತ್ತಿಗೆದಾರರು ಒದಗಿಸುವ ಕೆಲಸಗಾರರು ಘಟಕದ ಹಿತಾಸಕ್ತಿಗೆ ಮಾರಕವಾಗುವ ತರಹ ಕಾನೂನುಬಾಹಿರ ಚಟುವಟಿಕೆಗಳಲ್ಲಿ ತೊಡಗಿರಬಾರದು. ಘಟಕದ ಆವರಣದ ಒಳಗೆ ಮತ್ತು ಹೊರಗೆ ಗುತ್ತಿಗೆ ಕೆಲಸಗಾರರ ಕೃತ್ಯಗಳಿಗೆ ಗುತ್ತಿಗೆದಾರರೇ ಹೊಣೆಗಾರರು. ಅದ್ದರಿಂದ ಘಟಕಕ್ಕೆ ನಷ್ಟವಾದಲ್ಲಿ ಗುತ್ತಿಗೆದಾರರೇ ಭರಿಸಬೇಕಾಗುತ್ತದೆ. ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಯಾವುದೇ ರೀತಿಯಲ್ಲಿ ಘಟಕದ ಹಿತಾಸಕ್ತಿಗೆ ಧಕ್ಕೆಯಾಗದಂತೆ ಗುತ್ತಿಗೆದಾರರು ಕಾರ್ಯ ನಿರ್ವಹಿಸಬೇಕು.
8. ಗುತ್ತಿಗೆದಾರರು ಘಟಕದ ಆಸ್ತಿಯನ್ನು ಜಾಗರೂಕತೆಯಿಂದ ರಕ್ಷಿಸಿ ಕಾಪಾಡಬೇಕು ಮತ್ತು ಯಾವುದೇ ಆಗಬಾರದ ಘಟನೆ ಸಂಭವಿಸದಂತೆ ಜಾಗ್ರತೆ ವಹಿಸಬೇಕು. ಗುತ್ತಿಗೆದಾರರು ಒದಗಿಸಿರುವ ಕೆಲಸಗಾರರ

ನಿರ್ಲಕ್ಷ್ಯ ಹಾಗೂ ಬೇಜವಾಬ್ದಾರಿಯಿಂದ ಅಥವಾ ಉದ್ದೇಶ ಪೂರ್ವಕವಾಗಿ ಘಟಕಕ್ಕೆ ನಷ್ಟ ಉಂಟಾದಲ್ಲಿ, ಕಳವು ಆದಲ್ಲಿ, ವಸ್ತುಗಳು ತುಂಡಾದಲ್ಲಿ ಅವುಗಳ ಪೂರ್ಣ ಮೊತ್ತವನ್ನು ಘಟಕಕ್ಕೆ ಭರಿಸಲು ಗುತ್ತಿಗೆದಾರರು ಬದ್ಧರಿರಬೇಕು ಹಾಗೂ ಹೀಗೆ ಆಗುವ ನಷ್ಟವನ್ನು ದಂಡದೊಂದಿಗೆ ಮಾಹೆಯಾನ ಬಿಲ್ಲು / ಭದ್ರತಾ ಠೇವಣಿಯಲ್ಲಿ ಕಟಾಯಿಸಲಾಗುವುದು. ಗುತ್ತಿಗೆ / ಕಾರ್ಮಿಕರನ್ನು ಟೆಂಡರುದಾರರು ಘಟಕದ ಬೇಡಿಕೆ ಸೂಚನೆಗನುಗುಣವಾಗಿ ಉತ್ತಮವಾಗಿ ನಿಗಧಿತ ಸಮಯದಲ್ಲಿ ಒದಗಿಸಬೇಕು.

9. ಗುತ್ತಿಗೆದಾರರು ತಮಗೆ ವಹಿಸಿದ ಕೆಲಸ ಕಾರ್ಯಗಳನ್ನು ನಿರ್ವಹಿಸಲು ಪಡೆಯುವ ಕೆಲಸಗಾರರು ಗುತ್ತಿಗೆದಾರರ ನೌಕರರಾಗಿದ್ದು, ಯಾವಾಗಲು ಗುತ್ತಿಗೆದಾರರ ನೇರ, ಅನನ್ಯ (exclusive) ನಿಯಂತ್ರಣ ಮತ್ತು ಮೇಲ್ವಿಚಾರಣೆಗೆ ಒಳಪಟ್ಟಿರುತ್ತಾರೆ.

10. ~~ಯಾವುದೇ ಕಾರಣಕ್ಕೆ ಗುತ್ತಿಗೆ ಕೆಲಸಗಾರರು ಘಟಕದ ನೌಕರರಲ್ಲ. ಆದ್ದರಿಂದ ಗುತ್ತಿಗೆ ಕೆಲಸಗಾರರ ತಪ್ಪು~~ ಒಪ್ಪುಗಳಿಗೆ ಗುತ್ತಿಗೆದಾರರೇ ಜವಾಬ್ದಾರರು. ಘಟಕ ಮತ್ತು ಗುತ್ತಿಗೆದಾರರು/ ಗುತ್ತಿಗೆ ಕೆಲಸಗಾರರು ಇವರುಗಳ ಮಧ್ಯೆ ಯಾವುದೇ ರೀತಿಯಲ್ಲಿ ಏನೇ ಆದರೂ ಮಾಲೀಕ -ನೌಕರ ಸಂಬಂಧವಿರುವುದಿಲ್ಲ ಮತ್ತು ಗುತ್ತಿಗೆದಾರರು ಸ್ವಾತಂತ್ರ್ಯ ಏಜೆನ್ಸಿಯಾಗಿ ತಮ್ಮ ವ್ಯವಹಾರವನ್ನು ನಿರ್ವಹಿಸಬೇಕಾಗಿದ್ದು ಈ ವಾಸ್ತವಾಂಶವನ್ನು ಗುತ್ತಿಗೆದಾರರು ತಾವು ಕೆಲಸಕ್ಕೆ ನಿಯೋಜಿಸುವ ಎಲ್ಲರಿಗೂ ಸ್ಪಷ್ಟಪಡಿಸಬೇಕಾಗುತ್ತದೆ. ಗುತ್ತಿಗೆ ಅವಧಿಯು ಗುತ್ತಿಗೆ ಮಂಜೂರಾದ ದಿನಾಂಕದಿಂದ ಎರಡು ವರ್ಷಗಳದ್ದಾಗಿದ್ದು ಈ ಅವಧಿಯಲ್ಲಿ ಗುತ್ತಿಗೆದಾರರ ಕೆಲಸಕಾರ್ಯಗಳು ತೃಪ್ತಿಕರ / ಸಮರ್ಪಕವಾಗಿಲ್ಲದಿದ್ದಲ್ಲಿ ಗುತ್ತಿಗೆಯನ್ನು ರದ್ದುಪಡಿಸುವ ಹಾಗೂ ಭದ್ರತಾ ಠೇವಣಿಯನ್ನು ಮುಟ್ಟುಗೋಲು ಹಾಕಿಕೊಳ್ಳುವ ಹಾಗೂ ಕಪ್ಪು ಪಟ್ಟಿಗೆ ಸೇರಿಸುವ ಅಧಿಕಾರವನ್ನು ಘಟಕವು ಕಾಯ್ದಿರಿಸಿಕೊಂಡಿರುತ್ತದೆ.

11. ಘಟಕದ ಆವರಣದಲ್ಲಿ ಘಟಕವು ವಹಿಸಿರುವ ಗುತ್ತಿಗೆ ಕೆಲಸವನ್ನು ಮಾತ್ರ ನಿರ್ವಹಿಸಲು ಗುತ್ತಿಗೆದಾರರು ಮತ್ತು ಅವರ ಕೆಲಸಗಾರರಿಗೆ ಅವಕಾಶ ನೀಡಲಾಗಿದ್ದರೂ ಘಟಕದ ಆವರಣದ ಮೇಲೆ ಗುತ್ತಿಗೆದಾರರಿಗೆ ಯಾವುದೇ ಹಕ್ಕು ಸ್ವಾಮ್ಯ ಅಥವಾ ಧಾರಣಾಧಿಕಾರಿ (right, title orlien) ಇರುವುದಿಲ್ಲ. ಗುತ್ತಿಗೆದಾರರು ಮತ್ತು ಅವರ ಕೆಲಸಗಾರರು ಘಟಕದ ವಿವೇಚನೆ ಮೇರೆಗೆ ಘಟಕದ ಆವರಣವನ್ನು ತೆರವುಗೊಳಿಸಿ ಹೊರಹೋಗಬೇಕು. ಗುತ್ತಿಗೆದಾರರ ಕೆಲಸಗಾರರಿಂದ ಘಟಕದ ಕೆಲಸ ಕಾರ್ಯಗಳಿಗೆ ತೊಂದರೆ ಉಂಟು ಮಾಡುವ ಬೆದರಿಕೆಯಿಂದಾಗಿ ಕೈಗಾರಿಕಾ ಸಂಬಂಧದ ಸಮಸ್ಯೆ ಉದ್ಭವಿಸಿದಲ್ಲಿ ಗುತ್ತಿಗೆಯನ್ನು 24 ಘಂಟೆಯೊಳಗೆ ರದ್ದುಪಡಿಸಲಾಗುವುದು ಮತ್ತು ಗುತ್ತಿಗೆದಾರರು ಆ ಅವಧಿಯೊಳಗೆ ಕೆಲಸಕಾರ್ಯಗಳನ್ನು ನಿರ್ವಹಿಸಲು ಹೊಸ ಗುತ್ತಿಗೆದಾರರಿಗೆ / ವ್ಯವಸ್ಥೆಗೆ ಅವಕಾಶವಾಗುವಂತೆ ಘಟಕದ ಆವರಣವನ್ನು ತೆರವುಗೊಳಿಸಬೇಕು.

12. ಸಂಸ್ಥೆಯ ಹಿತದೃಷ್ಟಿಯಿಂದ ಗುತ್ತಿಗೆಯ ಅವಧಿಯಲ್ಲಿ ಗುತ್ತಿಗೆಯನ್ನು ತಕ್ಷಣದಿಂದ ರದ್ದುಗೊಳಿಸುವುದು ಅವಶ್ಯವೆಂದು ಕಂಡು ಬಂದಲ್ಲಿ ಯಾವುದೇ ಕಾರಣವನ್ನು ನಮೂದಿಸದೇ ಲಿಖಿತ ನೋಟೀಸ್‌ನ್ನು ನೀಡಿ ಗುತ್ತಿಗೆಯನ್ನು ರದ್ದುಪಡಿಸುವ ಅಧಿಕಾರವನ್ನು ಘಟಕವು ಕಾಯ್ದಿರಿಸಿಕೊಂಡಿದೆ.

13. ಗುತ್ತಿಗೆದಾರರು ಘಟಕದಿಂದ ನೀಡಲಾಗುವ ಗುತ್ತಿಗೆಯನ್ನು ಭಾಗಶವಾಗಲಿ/ ಪೂರ್ಣವಾಗಿ ಬೇರೆಯವರಿಗೆ ಒಳಗುತ್ತಿಗೆಗೆ / ಒಳಬಾಡಿಗೆಗೆ ನೀಡಬಾರದು.

14. ಗುತ್ತಿಗೆ ಕೆಲಸಗಾರರಿಗೆ ವಿವಿಧ ಕಾನೂನುಗಳಲ್ಲಿ ನಿಗಧಿಪಡಿಸಿದ ಸೌಲಭ್ಯ ಮತ್ತು ಸವಲತ್ತುಗಳನ್ನು ನೀಡುವುದು ಗುತ್ತಿಗೆದಾರರ ಶಾಸನಬದ್ಧ ಹೊಣೆಗಾರಿಕೆಯಾಗಿದ್ದರು ಅವುಗಳಿಗಿಂತ ಹೆಚ್ಚಿನ ಸೌಲಭ್ಯಗಳನ್ನು ನೀಡುವುದಾದಲ್ಲಿ ಸದರಿ ವೆಚ್ಚವನ್ನು ಗುತ್ತಿಗೆದಾರರೇ ಸ್ವತ: ಭರಿಸಬೇಕು. ಅದಾಗ್ಯೂ ಎಲ್ಲೆಲ್ಲಿ ಅನ್ವಯಿಸುವುದೋ ಅಂತಹ ಸ್ಥಳಗಳಲ್ಲಿ ಆರೋಗ್ಯ ಮತ್ತು ನೈರ್ಮಲ್ಯ ಕಾಪಾಡುವ ದೃಷ್ಟಿಯಿಂದ ಮತ್ತು ಸುರಕ್ಷಾ ಕ್ರಮಗಳ ಅನುಷ್ಠಾನಗೊಳಿಸುವಲ್ಲಿ ಘಟಕವು ನೀಡುವ ಸಲಹೆ ಸೂಚನೆಗಳಂತೆ ವಸ್ತ್ರನೀತಿಯನ್ನು ಕಡ್ಡಾಯವಾಗಿ ಪಾಲಿಸಲು ಗುತ್ತಿಗೆದಾರರು ಜವಾಬ್ದಾರರಾಗಿರುತ್ತಾರೆ.

15. ಗುತ್ತಿಗೆದಾರರು ಒದಗಿಸುವ ಎಲ್ಲಾ ಕೆಲಸಗಾರರನ್ನು ಕಾನೂನಿನ ಅನ್ವಯ ವೈದ್ಯಕೀಯ ತಪಾಸಣೆಗೆ ಒಳಪಡಿಸಿ ಅವರುಗಳ ಆರೋಗ್ಯ ದೃಢೀಕರಣ ಪತ್ರವನ್ನು ಪಡೆದಿರಬೇಕು. ಮಾತ್ರವಲ್ಲದೆ ಕೆಲಸಗಾರರು ತಮ್ಮ ದೈಹಿಕ/ ವಸ್ತ್ರಗಳ ಸ್ವಚ್ಛತೆಯನ್ನು ಕಾಪಾಡಿ.ಮುಖ ಕ್ಷೌರ ಮಾಡಿಸಿರಬೇಕು / ತಲೆಗೂದಲು / ಉಗುರು ಕತ್ತರಿಸಿರಬೇಕು. ಕೆಲಸಗಾರರು ಎಲೆ ಅಡಿಕೆ / ಬೀಡ/ ತಂಬಾಕು/ ಗುಟ್ಕಾ ಮುಂತಾದ ಜಗಿಯುವ ಪದಾರ್ಥಗಳನ್ನು ಹಾಗೂ ನಶ್ಯ ಸೇವನೆ ಧೂಮಪಾನ, ಮದ್ಯಸೇವನೆ ಮಾಡಿ ಕೆಲಸಕ್ಕೆ ಬರಬಾರದು ಮತ್ತು ಇವುಗಳನ್ನು ಕೆಲಸದ ಅವಧಿಯಲ್ಲಿ ಮಾಡಬಾರದು ಹಾಗೂ ಯಾವುದೇ ಕಾರಣಕ್ಕೂ ಘಟಕದ ಮಾಜಿ ಸಿಬ್ಬಂದಿ / ಗುತ್ತಿಗೆ ಭದ್ರತಾ ಸಿಬ್ಬಂದಿಗಳನ್ನು ನಿಯೋಜಿಸಿಕೊಳ್ಳಬಾರದು.

16. ಕಾಲಕಾಲಕ್ಕೆ ಆಗುವ ತಿದ್ದುಪಡಿಗಳೊಂದಿಗೆ ಜಾರಿಯಲ್ಲಿರುವ ವೇತನ ಪಾವತಿ ಕಾಯಿದೆ 1936, ಕನಿಷ್ಠ ವೇತನ ಕಾಯಿದೆ 1948, ಗುತ್ತಿಗೆ ಕಾರ್ಮಿಕ (ನಿಯಂತ್ರಣ ಮತ್ತು ರದ್ಧತಿ) ಕಾಯಿದೆ 1970, ನೌಕರರ ರಾಜ್ಯ ವಿಮಾ ಕಾಯಿದೆ 1948/ ಕೆಲಸಗಾರರ ಪರಿಹಾರ ಕಾಯಿದೆ 1923 ನೌಕರರ ಭವಿಷ್ಯನಿಧಿ ಮತ್ತು ಸಂಕೀರ್ಣ ಉಪಬಂಧ ಗಳ ಕಾಯಿದೆ 1952 ಬೋನಸ್ ಪಾವತಿ ಕಾಯಿದೆ, 1965 ಕಾರ್ಖಾನೆ ಕಾಯಿದೆ , 1948 ಉಪಧನ ಕಾಯಿದೆ , 1972 , ಕರ್ನಾಟಕ ಕಾರ್ಮಿಕ ಕಲ್ಯಾಣ ನಿಧಿ ಕಾಯಿದೆ 1965 , ಕರ್ನಾಟಕ ಕೈಗಾರಿಕೆ ಸಂಸ್ಥೆಗಳ (ರಾಷ್ಟ್ರೀಯ ಮತು ಹಬ್ಬದ ರಜಾ ದಿನಗಳು) ನಿಯಮಗಳು 1963 , ಆದಾಯ/ ವೃತ್ತಿ/ ಸೇವಾತೆರಿಗೆ ಕಾಯಿದೆ ಮುಂತಾದ ಕೆಲಸಗಾರರು ನಿಯೋಜನೆ ಹಾಗೂ ಗುತ್ತಿಗೆ ವ್ಯವಹಾರಕ್ಕೆ ಸಂಬಂಧಿಸಿದಂತೆ ಅನ್ವಯಿಸುವ ಕಾಲಕಾಲಕ್ಕೆ ಆಗುವ ತಿದ್ದುಪಡಿಗಳೊಂದಿಗೆ ಜಾರಿಯಲ್ಲಿರುವ ಕೇಂದ್ರ ಮತ್ತು ರಾಜ್ಯಗಳ ವಿವಿಧ ಕಾನೂನುಗಳು (Statutes), ಅಧಿನಿಯಮಗಳು (Acts) ನಿಯಮಗಳು (Rules) ವಿನಿಯಮಗಳು (Regulations) ಮತ್ತು ಆದೇಶಗಳು (Orders) ಇವುಗಳನ್ನು ಪಾಲಿಸಲು ಗುತ್ತಿಗೆದಾರರು ಬದ್ಧರಾಗಿರಬೇಕು.

17. ಹಿಂದಿನ ನಡತೆ ಸರಿಯಿಲ್ಲದ ಕೆಲಸಗಾರರನ್ನು ಗುತ್ತಿಗೆದಾರರು ಘಟಕದ ಕೆಲಸಕ್ಕೆ ನಿಯೋಜಿಸಬಾರದು ಗುತ್ತಿಗೆದಾರರು ಒದಗಿಸುವ ಕೆಲಸಗಾರರು ಕಾನೂನು ಬಾಹಿರ ಚಟುವಟಿಕೆಗಳಲ್ಲಿ ತೊಡಗಿರುವುದು ಕಂಡುಬಂದಲ್ಲಿ ಅಥವಾ ನಡತೆ/ ಕೆಲಸ ತೃಪ್ತಿಕರವಿಲ್ಲವೆಂದು ಘಟಕವು ತಿಳಿಸಿದ್ದಲ್ಲಿ ಅಂಥವರನ್ನು ಕೂಡಲೆ ಬದಲಾಯಿಸುವುದು.ಕೆಲಸಗಾರರು ಶಿಸ್ತಿನಿಂದ ಕಾರ್ಯನಿರ್ವಹಿಸುವಂತೆ ಸೂಕ್ತಕ್ರಮ ಕೈಗೊಳ್ಳುವುದು ಗುತ್ತಿಗೆದಾರರ ಜವಾಬ್ದಾರಿಯಾಗಿರುತ್ತದೆ. ಗುತ್ತಿಗೆ ಕಾರ್ಮಿಕರನ್ನು ಗುತ್ತಿಗೆದಾರರು ನಿಯೋಜಿಸುವ ಪೂರ್ವದಲ್ಲಿ ಅವರು ಯಾವುದೇ ಅನರ್ಹತೆ ಹೊಂದದ ಕ್ರಿಮಿನಲ್ ಹಿನ್ನಲೆ ಹೊಂದದೆ ಇರುವಂತಹ ಪೋಲಿಸ್ ಇಲಾಖೆಯಿಂದ ದೃಢೀಕರಿಸಿಕೊಳ್ಳುವುದು. ಇಲ್ಲವಾದಲ್ಲಿ ಗುತ್ತಿಗೆದಾರರು ಜವಾಬ್ದಾರರಾಗಿರುತ್ತಾರೆ.

18. ಗುತ್ತಿಗೆದಾರರು ಕಾರ್ಮಿಕರನ್ನು ನಿಯೋಜಿಸುವ ಪೂರ್ವದಲ್ಲಿ ಪ್ರತಿ ಸಿಬ್ಬಂದಿಗೂ ನೇಮಕಾತಿ ಆದೇಶವನ್ನು ನೀಡಿ ಅದರ ಪ್ರತಿಯನ್ನು ಕಚೇರಿಗೆ ಸಲ್ಲಿಸತಕ್ಕದ್ದು ಹಾಗೂ ಕೆಲಸಗಾರರು ಗುರುತಿನ ಸಂಖ್ಯೆಯನ್ನು ಪಡೆದು ತಮ್ಮ ಕೆಲಸಗಾರರ ಭಾವ ಚಿತ್ರವನ್ನು ಒಳಗೊಂಡ ಗುರುತಿನ ಚೀಟಿಯನ್ನು ಮತ್ತು ಪ್ರತಿ ತಿಂಗಳು ವೇತನ ಪಟ್ಟಿಯನ್ನು ನೀಡಬೇಕು. ಗುತ್ತಿಗೆದಾರರು ಕೆಲಸಗಾರರ ಹಾಜರಾತಿ ಪುಸ್ತಕ, ವೇತನ ಬಟವಾಡೆ ಪುಸ್ತಕ ಹಾಗೂ ಭಾವಚಿತ್ರದೊಂದಿಗೆ ವಿಳಾಸದ ವಿವರವನ್ನು, ಭವಿಷ್ಯ ನಿಧಿ, ರಾಜ್ಯ ನೌಕರರ ವಿಮಾವಂತಿಕೆ ದಾಖಲಾತಿಗಳನ್ನು ಕಾನೂನಿನಂತೆ ಇಟ್ಟುಕೊಂಡು ಅಗತ್ಯ ಬಿದ್ದಲ್ಲಿ ಶಾಸನ ಬದ್ಧ ಪ್ರಾಧಿಕಾರ / ಘಟಕದ ಪರಿಶೀಲನೆಗೆ ಸಲ್ಲಿಸಲು ಬದ್ಧರಾಗಿರುತ್ತಾರೆ. ಘಟಕದ ಕೆಲಸಕ್ಕೆ ನಿಯೋಜಿಸುವ ಎಲ್ಲಾ ಗುತ್ತಿಗೆ ಸಿಬ್ಬಂದಿಗೆ ಕಾಯಿದೆಯಂತೆ ಎಂಪ್ಲಾಯ್‌ಮೆಂಟ್ ಕಾರ್ಡ್ ಪ್ರತಿಯನ್ನು ಘಟಕಕ್ಕೆ \ ನೀಡುವುದು, ಮಾಸಿಕ ವೇತನದ ವಿವರದ ಚೀಟಿಗಳನ್ನು ನೀಡಬೇಕು.

19. ಗುತ್ತಿಗೆದಾರರು ಕೆಲಸಗಾರರಿಗೆ ಪಾವತಿಸುವ ವೇತನದಲ್ಲಿ ಭವಿಷ್ಯ ನಿಧಿ ಮತ್ತು ನೌಕರರ ರಾಜ್ಯವಿಮೆ ವಂತಿಗೆಯನ್ನು ಕಟಾಯಿಸಿ, ಸಂಬಂಧಪಟ್ಟ ಇಲಾಖೆಗೆ ಮಾಲೀಕರ ವಂತಿಗೆಯೊಂದಿಗೆ ಪಾವತಿಸಲು ಬದ್ಧರಿರುತ್ತಾರೆ. ಸದರಿ ವಂತಿಕೆ ಪಾವತಿಯಲ್ಲಿ ಸುಸ್ತಿದಾರರಾದಲ್ಲಿ ಅಥವಾ ವ್ಯತ್ಯಾಸವಾದಲ್ಲಿ ದಂಡ ಒಳಗೊಂಡು ತತ್‌ಪರಿಣಾಮ ಉದ್ಭವಿಸುವ ಪರಿಣಾಮಗಳಿಗೆ ಗುತ್ತಿಗೆದಾರರೇ ಜವಾಬ್ದಾರರಾಗಿರುತ್ತಾರೆ. ಘಟಕವು ಯಾವುದೇ ರೀತಿಯಲ್ಲಿ ಇದಕ್ಕೆ ಜವಾಬ್ದಾರರಲ್ಲ. ಅನಿವಾರ್ಯ ಸಂದರ್ಭಗಳಲ್ಲಿ ಭವಿಷ್ಯ ನಿಧಿ ಮತ್ತು ನೌಕರರ ರಾಜ್ಯ ವಿಮಾ ದೇಣಿಗೆಯನ್ನು ಗುತ್ತಿಗೆದಾರರ ಬಿಲ್ಲಿನಲ್ಲಿ ಕಟಾಯಿಸಿ ಸಂಬಂಧಿಸಿದವರಿಗೆ ಪಾವತಿಸಲು ಘಟಕವು ಅಧಿಕಾರವನ್ನು ಹೊಂದಿರುತ್ತದೆ. ಗುತ್ತಿಗೆದಾರರು ನಿಯೋಜಿಸುವ ಪ್ರತಿ ಒಬ್ಬ ಕೆಲಸಗಾರರಿಗೆ ಸಂಬಂಧಿಸಿದಂತೆ ಹಿಂದಿನ ತಿಂಗಳ ಭವಿಷ್ಯ ನಿಧಿ ಮತ್ತು ನೌಕರರ ರಾಜ್ಯವಿಮೆ ವಂತಿಗೆಯನ್ನು ಸಂಬಂಧಪಟ್ಟ ಇಲಾಖೆಗೆ ಪಾವತಿಸಿರುವ ಬಗ್ಗೆ ದಾಖಲಾತಿಗಳನ್ನು (challan) ಪ್ರತಿ ತಿಂಗಳ ಬಿಲ್ಲಿನೊಂದಿಗೆ ದೃಢೀಕರಿಸಿ ಕಡ್ಡಾಯವಾಗಿ ಲಗತ್ತಿಸಬೇಕು ಮತ್ತು ವೇತನದ ಪುಸ್ತಕವನ್ನು ಪರಿಶೀಲನೆಗೆ ಹಾಜರುಪಡಿಸಬೇಕು. ಗುತ್ತಿಗೆದಾರರು ಪಿ.ಎಫ್: ಪಾವತಿಗೆ ಸಂಬಂಧಿಸಿದಂತೆ ಇಲಾಖೆಯು ನಿಯಮಾನುಸಾರ ನೀಡುವ ಮಾಸಿಕ / ವಾರ್ಷಿಕ ದಾಖಲೆಗಳನ್ನು ಕಾರ್ಮಿಕರಿಗೆ ಆಗಿಂದಾಗ್ಗೆ ಒದಗಿಸುವುದು. ಇಲ್ಲದಿದ್ದಲ್ಲಿ ಬಿಲ್ಲು ಪಾವತಿಸಲಾಗುವುದಿಲ್ಲ.

20. ಘಟಕ ವಹಿಸಿರುವ ಕೆಲಸವನ್ನು .ಸಂಬಂಧಿಸಿದ ಅಧಿಕಾರಿಗಳ ಸೂಚನೆಯಂತೆ ನಿರ್ವಹಿಸುವುದು . ಗುತ್ತಿಗೆ ಕಾರ್ಮಿಕರು ಕೆಲಸವಿರುವಾಗ ಮಾತ್ರ ಘಟಕದ ಆವರಣವನ್ನು ಪ್ರವೇಶಿಸುವುದು ಮತ್ತು ಕೆಲಸ ಇಲ್ಲದ ಅವಧಿಯಲ್ಲಿ ಘಟಕದ ಆವರಣದಲ್ಲಿ ಇರಬಾರದು. ಘಟಕದ ಆವರಣದ ಒಳಗೆ ಬರುವಾಗ ಮತ್ತು ಹೊರಗೆ ಹೋಗುವಾಗ ಭದ್ರತಾ ವಿಭಾಗ / ಅಧಿಕಾರಿಗಳ ತಪಾಸಣೆಗೆ ಒಳಪಡಬೇಕು.

21. ಘಟಕವು ಗುತ್ತಿಗೆದಾರರಿಗೆ ವಹಿಸಿದ ಗುತ್ತಿಗೆಯನ್ನು ಘಟಕದ ಸೂಚನೆಗಳಂತೆ ನಿರ್ವಹಿಸಲು ಗುತ್ತಿಗೆದಾರರು ನಿಯುಕ್ತಿಗೊಳಿಸುವ ಕೆಲಸಗಾರರ ಒಟ್ಟು ಸಂಖ್ಯೆ, ಗುತ್ತಿಗೆ ಅವಧಿ ಬಗ್ಗೆ ಗುತ್ತಿಗೆ ಕಾರ್ಮಿಕ (ನಿಯಂತ್ರಣ ಮತ್ತು ರದ್ಧತಿ) ಕಾಯಿದೆಯಲ್ಲಿ ನಮೂದಿಸಿರುವ ರೀತ್ಯಾ ನಮೂನೆ VI ರಲ್ಲಿ ಗುತ್ತಿಗೆ ಕಾರ್ಮಿಕ ಪರವಾನಗಿಯನ್ನು ಗುತ್ತಿಗೆ ಪಡೆದು ೧೫ ದಿನಗಳೊಳಗೆ ಸಕ್ಷಮ ಪ್ರಾಧಿಕಾರದಿಂದ ಪಡೆದು ಘಟಕಕ್ಕೆ ಸಲ್ಲಿಸಬೇಕು. ನಿಯೋಜಿಸುವ ಕೆಲಸಗಾರರ ಸಂಖ್ಯೆಯಲ್ಲಿ/ ಅವಧಿಯಲ್ಲಿ ಮಾರ್ಪಾಡು ಆದಲ್ಲಿ ಗುತ್ತಿಗೆ ಕಾರ್ಮಿಕ ಪರವಾನಗಿಯಲ್ಲಿ ನಮೂದಿಸಿರುವ ಕೆಲಸಗಾರರ ಸಂಖ್ಯೆಯು ಘಟಕದಲ್ಲಿ ಸಂಬಂಧಿಸಿದ ಗುತ್ತಿಗೆದಾರರ ಅಡಿಯಲ್ಲಿ ಕೆಲಸ ನಿರ್ವಹಿಸುವ ಗುತ್ತಿಗೆ ಕೆಲಸಗಾರರ ಒಟ್ಟು ಸಂಖ್ಯೆಗೆ ಎಲ್ಲಾ ಸಂದರ್ಭಗಳಲ್ಲಿ ತಪ್ಪದೇ ತಾಳೆಯಾಗಬೇಕು ಅದರಂತೆ ಕಾರ್ಮಿಕ ಪರವಾನಿಗೆಯಲ್ಲಿ ಅಗತ್ಯ ತಿದ್ದುಪಡಿಗಳನ್ನು ಸಂಬಂಧಿಸಿದ ಇಲಾಖೆಯಿಂದ ಮಾಡಿಸಿ ಘಟಕಕ್ಕೆ ಅದರ ಪ್ರತಿ ಸಲ್ಲಿಸಬೇಕು. ಗುತ್ತಿಗೆ ಅವಧಿ ಮುಗಿದ ನಂತರ ಕಾರ್ಮಿಕ ಇಲಾಖೆಗೆ ನಿಯಮಾನುಸಾರ ತಿಳಿಸುವ ಜವಾಬ್ದಾರಿ ಗುತ್ತಿಗೆದಾರರದ್ದಾಗಿರುತ್ತದೆ.

22. ಗುತ್ತಿಗೆ ಪಡೆದ ಟೆಂಡರುದಾರರು ತಾವು ವಹಿಸಿಕೊಳ್ಳುವ ಜವಾಬ್ದಾರಿ ಮತ್ತು ಬಾಧ್ಯತೆಗಳನ್ನು ಘಟಕದ ಅವಶ್ಯತೆಗಳಿಗನುಣವಾಗಿ ಕೆಲವು ಕೆಲಸಗಳಿಗೆ ವಾರದ ರಜೆ ಮತ್ತು ಸಾರ್ವತ್ರಿಕ ರಜಾ ದಿನಗಳು ಒಳಗೊಂಡಂತೆ ಎಲ್ಲಾ ದಿನಗಳಿಗೂ ಹಾಗೂ ಕೆಲವು ಕೆಲಸಗಳಿಗೆ ಕಛೇರಿ ತುರ್ತು ದಿನಗಳಂದು ಮಾತ್ರ ಒದಗಿಸುವ ಗುತ್ತಿಗೆ ಕಾರ್ಮಿಕರು 7 ನೇ ತರಗತಿಯಲ್ಲಿ ಉತ್ತೀರ್ಣರಾಗಿದ್ದು ಕನ್ನಡ ತಿಳಿದಿರಬೇಕು. ಸಿಬ್ಬಂದಿಯು ಕನಿಷ್ಠ ೫ ಅಡಿ ೫ ಇಂಚು ಎತ್ತರವಿದ್ದು ದೈಹಿಕವಾಗಿ ಸಮರ್ಥರಾದ 2೫ ರಿಂದ ೫೦ ವಯೋಮಾನದ ಆರೋಗ್ಯವಂತ ಕೆಲಸಗಾರರನ್ನು ನಿಯುಕ್ತಿಗೊಳಿಸಿ ಎಲ್ಲಾ ಪಾಳಿಗಳಲ್ಲಿ ಉಸ್ತುವಾರಿ ಮಾಡಲು ಮತ್ತು ಮತ್ತು ಘಟಕದ ವಿವಿಧ ಪಾಳಿಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಕೆಲಸಗಾರರನ್ನು ನಿಯಂತ್ರಿಸಲು ಗುತ್ತಿಗೆದಾರರ ಜವಬ್ದಾರಿ ಹಾಗೂ ವೆಚ್ಚದಲ್ಲಿ ಅರ್ಹ ಸಮರ್ಥ ಮತ್ತು ನುರಿತ ಮೇಲ್ವಿಚಾರಕರನ್ನು ಹೊಂದಿರಬೇಕು. ಇವರುಗಳು ಕೆಲಸಗಾರರು ಕೆಲಸಕ್ಕೆ ಹಾಜರಾಗುವ ಸಮಯ ಮತ್ತು ಕೆಲಸ ಮುಗಿಸಿ ಹೊರಗೆ ಹೋಗುವ ನಿಯೋಜಿಸುವ ಬಗ್ಗೆ ನಿಗಾ ಇಡಬೇಕು ಹಾಗೂ ಶಾಸನಬದ್ಧ ಕಟಾವಣೆಗಳ ಪಾವತಿಯ ಬಗ್ಗೆ ಜವಾಬ್ದಾರರಾಗಿ ಅಗತ್ಯ ವಿವರಗಳನ್ನು ಒದಗಿಸುವುದು ಅಗತ್ಯವಾದಾಗ ಪಾಳಿಯ ಸಮಯ ಬದಲಾಗಬಹುದು ಅಲ್ಲದೆ ಕೆಲವು ಕೆಲಸಗಳನ್ನು ಕೆಲಸಕ್ಕೆ ಅನುಗುಣವಾಗಿ ಸ್ಪ್ಲಿಟ್ ಹವರ್ Split Hour) ನಲ್ಲಿ ಕಾರ್ಯ ನಿರ್ವಹಿಸಬೇಕಾಗಿರುತ್ತದೆ. ಈ ಬಗ್ಗೆ ಕಾಲ ಕಾಲಕ್ಕೆ ಘಟಕವು ನೀಡುವ ಸೂಚನೆಗಳನ್ನು ಪಾಲಿಸುವುದು.

23. ಘಟಕದಿಂದ ಪಡೆದ ಉಪಕರಣ ಸಲಕರಣೆಗಳನ್ನು ಸುರಕ್ಷಿತವಾಗಿಟ್ಟು ಸೂಚಿಸಿದಾಗ ಪರಿಶೀಲನೆಗೆ ಹಾಜರುಪಡಿಸಿಬೇಕು ಮತ್ತು ಗುತ್ತಿಗೆ ಅವಧಿ ಮುಗಿದ ನಂತರ ಹಿಂದಿರುಗಿಸಬೇಕು. ಒಪ್ಪಂದದಡಿಯಲ್ಲಿ ಗುತ್ತಿಗೆದಾರರಿಗೆ ಇರುವ ಬಾಧ್ಯತೆಗಳನ್ನು ಯಾವುದೇ ಸಮಯದಲ್ಲಿ ಪೂರೈಸಲು ಗುತ್ತಿಗೆದಾರರು ವಿಫಲರಾದಲ್ಲಿ ಅಥವಾ ಗುತ್ತಿಗೆದಾರರು ಒಪ್ಪಂದದಂತೆ ನಿಗದಿಪಡಿಸಿದ ಕೆಲಸಕಾರ್ಯಗಳನ್ನು ಷರತ್ತಿಗನುಗುಣವಾಗಿ ನಿರ್ವಹಿಸಲು ವಿಫಲರಾದಲ್ಲಿ ಅಥವಾ ಗುತ್ತಿಗೆದಾರರು ಯಾವುದೇ ಮುಂಚಿತ ನೋಟಿಸ್ ನೀಡದೆ ಗುತ್ತಿಗೆ ನಿರ್ವಹಿಸುವುದನ್ನು ನಿಲ್ಲಿಸಿದಲ್ಲಿ ಅಥವಾ ಗುತ್ತಿಗೆಯ ಷರತ್ತು ಮತ್ತು ನಿಬಂಧನೆಗಳ ಉಲ್ಲಂಘನೆಗಾಗಿ ಅಥವಾ ತೃಪ್ತಿಕರ ಸೇವೆ ಒದಗಿಸದ ಪ್ರಯುಕ್ತ ಘಟಕದ ಗುತ್ತಿಗೆಯನ್ನು ರದ್ದುಪಡಿಸಿದ್ದಲ್ಲಿ ಅಥವಾ ಗುತ್ತಿಗೆಯ ಅವಧಿಯಲ್ಲಿ ಕರಾರಿನ ನಿರಾಕರಣೆ ಮಾಡಿದಲ್ಲಿ ಘಟಕದ ಇತರೇ ಹಕ್ಕುಗಳಿಗೆ ಬಾಧಕವಾಗದ ರೀತಿಯಲ್ಲಿ ಬೇರೆ ಏಜೆನ್ಸಿಯ ಮೂಲಕ ಬದಲಿ ವ್ಯವಸ್ಥೆ ಕೈಗೊಳ್ಳಲು ಅಧಿಕಾರ ಹೊಂದಿದ್ದು ಇದಕ್ಕೆ ತಗಲುವ ವೆಚ್ಚ ಒಳಗೊಂಡು ಘಟಕಕ್ಕೆ ಆಗುವ ನಷ್ಟದ ಮೊತ್ತ ಬರಬೇಕಾದ ಯಾವುದೇ ಬಾಕಿ ಗುತ್ತಿಗೆದಾರರ ವಿರುದ್ಧ ನಿರ್ಧರಿಸಲಾದ ನಿಗದಿತ ಹಾನಿ ಪರಿಹಾರ (Liquidated damages) ವನ್ನು ಸೂಕ್ತ ದಂಡದೊಂದಿಗೆ ಗುತ್ತಿಗೆದಾರರ ಬಾಕಿ ಇರುವ ಬಿಲ್ಲುಗಳ ಮೊತ್ತದಿಂದ ಮತ್ತು ಅವಶ್ಯಕತೆ ಇದ್ದಲ್ಲಿ ಭದ್ರತಾ ಠೇವಣಿಯಿಂದ ಕಟಾಯಿಸಲಾಗುವುದು.

24. ಗುತ್ತಿಗೆ ಅವಧಿ ಮುಕ್ತಾಯಗೊಂಡ ಅಥವಾ ಗುತ್ತಿಗೆ ರದ್ದುಗೊಂಡ ಎರಡು ತಿಂಗಳ ನಂತರ ಘಟಕಕ್ಕೆ ಬರಬೇಕಾದ ಬಾಕಿಗಳನ್ನು ಮತ್ತು ಆಗಿರಬಹುದಾದ ನಷ್ಟವನ್ನು ನಗದು ರೂಪದಲ್ಲಿ ಇಟ್ಟಿರುವ ಭದ್ರತಾ ಠೇವಣಿಯಲ್ಲಿ ಅಥವಾ ಭದ್ರತಾ ಠೇವಣಿಯಾಗಿ ನೀಡಿದ ಬ್ಯಾಂಕ್ ಗ್ಯಾರಂಟಿಯನ್ನು ನಗದೀಕರಿಸಿ ಸದರಿ ಮೊತ್ತದಿಂದ ಕಟಾಯಿಸಿ ಲೆಕ್ಕ ಹೊಂದಾಣಿಕೆ ಮಾಡಿಕೊಂಡು ಉಳಿಕೆ ಭದ್ರತಾ ಠೇವಣಿಯ ಮೊತ್ತವನ್ನು ಬಡ್ಡಿರಹಿತವಾಗಿ ಹಿಂದಿರುಗಿಸಲಾಗುವುದು.

25. ಕರಾರಿನ ಯಾವುದೇ ಷರತ್ತು ಮತ್ತು ನಿಬಂಧನೆಗಳನ್ನು ಅಥವಾ ಇಡೀ ಒಪ್ಪಂದವನ್ನು ಪಾಲಿಸದಿದ್ದಲ್ಲಿ / ಪೂರೈಸದಿದ್ದಲ್ಲಿ ನಷ್ಟ ಭರ್ತಿ ಹಾಗೂ ಹಾನಿ ಪರಿಹಾರ (Liquidated damages) ದಂಡವನ್ನು ಪಾವತಿಸದಿದ್ದಲ್ಲಿ ಭದ್ರತಾ ಠೇವಣಿಯನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

26. ಗುತ್ತಿಗೆ ಅವಧಿಯಲ್ಲಿ ಘಟಕಕ್ಕೆ ಯಾವುದೇ ರೀತಿಯ ನಷ್ಟ/ ಹಾನಿ ಉಂಟಾದಲ್ಲಿ ಹಾಗೂ ಗುತ್ತಿಗೆಗೆ ಸಂಬಂಧಿಸಿದ ಕೆಲಸಗಳಿಂದಾಗಿ ಉದ್ಭವಿಸಬಹುದಾದ ಯಾವುದೇ ಬೇಡಿಕೆಯು(Claims) ಯಾರಿಂದಲಾದರೂ ಘಟಕಕ್ಕೆ ಬಂದಲ್ಲಿ ಅದರಿಂದಾಗುವ ನಷ್ಟ/ಹಾನಿ ಭರ್ತಿ (Indemnify) ಮಾಡಿಕೊಡಲು ಗುತ್ತಿಗೆದಾರರು ಬದ್ಧರಿರುತ್ತಾರೆ. ಈ ಗುತ್ತಿಗೆ ಅಸ್ತಿತ್ವದಲ್ಲಿರುವಾಗ ಗುತ್ತಿಗೆದಾರರು ಪ್ರತ್ಯಕ್ಷವಾಗಿಯಾಗಲಿ, ಪರೋಕ್ಷವಾಗಿಯಾಗಲಿ, ಸ್ವ ಇಚ್ಛೆಯಿಂದಾಗಲಿ ಅಥವಾ ಅನೈಚ್ಛಿಕವಾಗಿಯಾಗಲಿ ಕೈಗೊಳ್ಳುವ ಎಲ್ಲಾ ಕೃತ್ಯಗಳು ಅಥವಾ ಕಾರ್ಯಗಳು ಅಥವಾ ವಿಷಯಗಳು ಅಲ್ಲದೆ ವಿಫಲತೆಯಿಂದ ಅಥವಾ ನಿರ್ಲಕ್ಷದಿಂದ ಅಥವಾ ದುರ್ನಡತೆಯಿಂದ ಕೆಲಸ ಮಾಡುವುದು ಅಥವಾ ಮಾಡದಿರುವುದು (Commission as well as omission) ಇವುಗಳಿಂದ ಉಂಟಾಗುವ ಎಲ್ಲಾ ಕೃತ್ಯಗಳು ಅಥವಾ ಕಾರ್ಯಗಳು ಅಥವಾ ವಿಷಯಗಳು ಇವುಗಳ ದೆಸೆಯಿಂದ ಆಗುವ ನಷ್ಟವನ್ನು ಘಟಕಕ್ಕೆ ಭರ್ತಿ ಮಾಡಿಕೊಡಬೇಕು.

27. ಗುತ್ತಿಗೆ ಕಾರ್ಮಿಕರ ಕೆಲಸದ ಪರಿಮಾಣವು ಘಟಕದ ಅವಶ್ಯಕತೆಯ ಮೇಲೆ ವ್ಯತ್ಯಾಸವಾಗಬಹುದು ಅದಕ್ಕೆ ಅನುಗುಣವಾಗಿ ಗುತ್ತಿಗೆ ಕಾರ್ಮಿಕರನ್ನು ಒದಗಿಸಬೇಕಾಗುತ್ತದೆ.

28. ಘಟಕದಿಂದ ಗುತ್ತಿಗೆದಾರರಿಗೆ ನೀಡಬೇಕಾದ ಪತ್ರಗಳನ್ನು ಗುತ್ತಿಗೆದಾರರ ಮೇಲ್ವಿಚಾರಕರ ಮೂಲಕ ಅಥವಾ ಗುತ್ತಿಗೆದಾರರು ನೀಡಿರುವ ವಿಳಾಸಕ್ಕೆ ಅಂಚೆ ಮೂಲಕ ರವಾನಿಸಲಾಗುವುದು. ಈ ರೀತಿ ಪತ್ರಗಳನ್ನು ರವಾನಿಸಿದಾಗ ಅದನ್ನು ಪತ್ರಗಳ ಸಮರ್ಪಕ ಬಟವಾಡೆ (Deemed service) ಎಂದು ಪರಿಗಣಿಸಲಾಗುವುದು. ಆದ್ದರಿಂದ ಒಂದು ವೇಳೆ ವಿಳಾಸದಲ್ಲಿ ಬದಲಾವಣೆ ಆದಲ್ಲಿ ಅದನ್ನು ಗುತ್ತಿಗೆದಾರರು ಲಿಖಿತವಾಗಿ ಕೂಡಲೇ ಘಟಕಕ್ಕೆ ತಿಳಿಸಬೇಕು.

29. ಗುತ್ತಿಗೆಯ ನಿರ್ವಹಣೆಯಲ್ಲಿ ಯಾವುದೇ ಭಿನ್ನಾಭಿಪ್ರಾಯ ಉಂಟಾದಲ್ಲಿ ಅಥವಾ ಒಪ್ಪಂದದ ಉಪಬಂಧಗಳನ್ನು ಅರ್ಥೈಸುವಲ್ಲಿ ಯಾವುದೇ ಅನುಮಾನ ಉಂಟಾದಲ್ಲಿ ಘಟಕದ ನಿರ್ದೇಶಕರ ತೀರ್ಮಾನವೇ ಅಂತಿಮವಾಗಿದ್ದು ಅದಕ್ಕೆ ಗುತ್ತಿಗೆದಾರರು ಬದ್ಧರಿರಬೇಕು.

30. ಟೆಂಡರುದಾರರು ಗುತ್ತಿಗೆಗೆ ಸಂಬಂಧಿಸಿದ ಷರತ್ತು ನಿಬಂಧನೆಗಳನ್ನು ಉಲ್ಲಂಘಿಸಿದಲ್ಲಿ, ಸೂಕ್ತ ಹಣ ದಂಡ ವಿಧಿಸುವ ಹಾಗು ಗುತ್ತಿಗೆಯನ್ನು ರದ್ದುಪಡಿಸಿ ಭದ್ರತಾ ಠೇವಣಿಯನ್ನು ಮುಟ್ಟುಗೋಲು ಹಾಕಿಕೊಳ್ಳುವ ಹಕ್ಕನ್ನು ಘಟಕದ ಮುಖ್ಯಸ್ಥರು ಹೊಂದಿರುತ್ತಾರೆ.

31. ಗುತ್ತಿಗೆ ನೌಕರರು ಪ್ರತಿದಿನ ಕೆಲಸಕ್ಕೆ ಹಾಜರಾಗುವಾಗ ಘಟಕದ ಭದ್ರತಾ ಶಾಖೆಯಲ್ಲಿ ಭದ್ರತಾ ತಪಾಸಣೆಗೆ ಒಳಪಡಿಸಬೇಕು.

32. ಗುತ್ತಿಗೆದಾರರು ತಮ್ಮ ಗುತ್ತಿಗೆ ಕಾರ್ಮಿಕರಿಗೆ ಇ.ಎಸ್.ಐ ಬದಲು ವಿಮಾ ಪಾಲಿಸಿ (Insurance policy) ಯನ್ನು ಕಡ್ಡಾಯವಾಗಿ ಮಾಡಿಸತಕ್ಕದ್ದು.

33. ಪಿ.ಎಫ್ ವಂತಿಕೆಯನ್ನು ಆನ್ ಲೈನ್‌ನಲ್ಲಿ ಘಟಕದಲ್ಲಿ ಪರಿಶೀಲಿಸಲು ಗುತ್ತಿಗೆದಾರರು ವ್ಯವಸ್ಥೆ ಮಾಡುವುದು.

34. ಗುತ್ತಿಗೆ ಕಾರ್ಮಿಕರನ್ನು ಕಾರ್ಯ ನಿರ್ವಹಣೆಯ ಬಗ್ಗೆ ಗುತ್ತಿಗೆದಾರರು ಕಾಲ ಕಾಲಕ್ಕೆ ಕನಿಷ್ಠ ತಿಂಗಳಿಗೆ ಒಂದು ಬಾರಿ ಮೇಲ್ವಿಚಾರಣೆ ನಡೆಸಿ ವಿಭಾಗಾಧಿಕಾರಿಗಳ ಗಮನಕ್ಕೆ ಲಿಖಿತವಾಗಿ ಕೂಡಲೆ ವಿಳಂಬವಿಲ್ಲದೆ ತಿಳಿಸತಕ್ಕದ್ದು.

35. ಗುತ್ತಿಗೆದಾರರು ಮತ್ತು ಘಟಕಕ್ಕೆ ಯಾವುದೇ ಭಿನ್ನಾಭಿಪ್ರಾಯ, ವ್ಯಾಜ್ಯ ಉಂಟಾದಲ್ಲಿ ಅವುಗಳನ್ನು ಮಧ್ಯಸ್ಥದಾರರ ಮೂಲಕ ಇತ್ಯಾರ್ಥಗೊಳಿಸತಕ್ಕದ್ದು. ಮಧ್ಯಸ್ಥದಾರರನ್ನು ಘಟಕದ ನಿರ್ದೇಶಕರು ಇವರು ನೇಮಿಸುವ ಅಧಿಕಾರವನ್ನು ಹೊಂದಿರುತ್ತಾರೆ.

38. ಕ್ರ.ಸಂ.34 ಕ್ಕೆ ಒಳಪಟ್ಟು ಯಾವುದೇ ವ್ಯಾಜ್ಯಕ್ಕೆ ಸಂಬಂಧಿಸಿದಂತೆ ಘಟಕದ ವ್ಯಾಪ್ತಿಯ ನ್ಯಾಯಾಲಯದಲ್ಲಿ ಮಾತ್ರ ದಾವೆ ಹೂಡಬಹುದಾಗಿದೆ.

ನಿರ್ದೇಶಕರು
ನಂದಿನಿ ಹೈಟೆಕ್ ಪ್ರಾಡಕ್ಟ್ ಪ್ಲಾಂಟ್ ಬರಾಪ ಪರವಾಗಿ

ಗೆ: ಮೆ: ಈಶ್ವರ್ ಎಂಟರ್ ಪ್ರೈಸಸ್, ನಂ.8, 1ನೇ ಕ್ರಾಸ್
ಮುಕ್ತರಾಜ್ ಬಡಾವಣೆ, ಬನ್ನೇರುಘಟ್ಟ ರಸ್ತೆ,
ಬೆಂಗಳೂರು -560 030.

ಪ್ರತಿ: 1. ಪ್ರಧಾನ ವ್ಯವಸ್ಥಾಪಕರು ಬರಾಪ ರವರ ಮಾಹಿತಿಗಾಗಿ
2. ಉಪ ವ್ಯವಸ್ಥಾಪಕರು (ವಿತ್ತ) ಬರಾಪ ರವರ ಮಾಹಿತಿಗಾಗಿ
3. ಭದ್ರತಾ ಮೇಲ್ವಿಚಾರಕರು ಬರಾಪ ರವರ ಮಾಹಿತಿಗಾಗಿ
4. ಕಛೇರಿ ಪ್ರತಿ



# ನಂದಿನಿ ಹೈಟೆಕ್ ಪ್ರಾಡಕ್ಟ್ ಪ್ಲಾಂಟ್ ಶೆಟ್ಟಿಹಳ್ಳಿ ಚನ್ನರಾಯಪಟ್ಟಣ

ಸಂಖ್ಯೆ: ಕಹಾಮ :ನಹೈಪ್ರಾಪ್ಲಾ/ಚರಾಪ/ಗು.ಕಾ/2019 / 1087 ದಿನಾಂಕ:01.08.2019

## ಗುತ್ತಿಗೆ ಕಾರ್ಯಾದೇಶ

ವಿಷಯ: ಘಟಕದಲ್ಲಿ ಉತ್ಪಾದನಾ ಪ್ರದೇಶದ ಕೆಲಸಗಳನ್ನು ನಿರ್ವಹಿಸಲು ಗುತ್ತಿಗೆ ಕಾರ್ಮಿಕರನ್ನು ಒದಗಿಸುವ ಬಗ್ಗೆ

ಉಲ್ಲೇಖ 1. ಟೆಂಡರ್ ಪ್ರಕಟಣೆ ಸಂಖ್ಯೆ:KMF/NHPP/ADMIN /L.T/002/2018-19

2. ವಾಣಿಜ್ಯ ಟೆಂಡರ್ ತೆರೆದ ದಿನಾಂಕ: 30.05.2019 ಸಭಾ ನಡಾವಳಿ

3. ದರ ಸಂಧಾನ ನಡೆದ ದಿನಾಂಕ:04.06.2019ರ ಸಮಿತಿ ಸಭೆಯ ನಡಾವಳಿ

4. ಒಪ್ಪಿಗೆ ಪತ್ರ ಸಂಖ್ಯೆ: KMF/NHPP-CRP/PUR/Tender Doc/LabourTender/2019-20/755D:28.06.2019

5. ಕರಾರು ಪತ್ರ ದಿನಾಂಕ: 31.07.2019

---

ಕಹಾಮ ನಂದಿನಿ ಹೈಟೆಕ್ ಪ್ರಾಡಕ್ಟ್ ಪ್ಲಾಂಟ್ ಇಲ್ಲಿಗೆ ಉತ್ಪಾದನೆ ಮತ್ತು ಸ್ವಚ್ಛತಾ ಕೆಲಸಗಳ ನಿರ್ವಹಣೆಗೆ ಗುತ್ತಿಗೆ ಆಧಾರದ ಮೇಲೆ ಕಾರ್ಮಿಕರನ್ನು ನೀಡುವ ಕುರಿತಂತೆ ಸಲ್ಲಿಸಲಾದ ಉಲ್ಲೇಖ (1) ಟೆಂಡರ್ ಹಾಗೂ ಉಲ್ಲೇಖ ( 5) ರ ಕರಾರು ಪತ್ರ ಇವುಗಳನ್ನು ಪರಿಗಣಿಸಿ, ದಿನಾಂಕ:01.07.2019 ರಿಂದ 30.06.2021 ವರೆಗೆ ಎರಡು ವರ್ಷಗಳ ಅವಧಿಗೆ ಕರಾರು ಪತ್ರದಲ್ಲಿ ಒಪ್ಪಿರುವಂತೆ ಈ ಕೆಳಗೆ ನಮೂದಿಸಿರುವ ದರಗಳಲ್ಲಿ ಮತ್ತು ನಿಬಂಧನೆ ಹಾಗೂ ಷರತ್ತಿಗೊಳಪಟ್ಟು ಗುತ್ತಿಗೆ ಆಧಾರದ ಮೇಲೆ ಕಾರ್ಮಿಕರನ್ನು ಒದಗಿಸಿ ವಿವಿಧ ಗುತ್ತಿಗೆ ಕೆಲಸಗಳನ್ನು ನಿರ್ವಹಿಸಲು ಈ ಮೂಲಕ ಆದೇಶಿಸಿದೆ.

| ಕ್ರ. ಸಂ | ವಿವರ | ನುರಿತಲ್ಲದ ಕಾರ್ಮಿಕರು |
|---|---|---|
| 1 | ಪ್ರತಿ ಮಾಹೆಯ ವೇತನ | ರೂ.10885.80 |
| 2 | ಉದ್ಯೋಗದಾತರ ಪಿ.ಎಫ್ ಬಾಬ್ತು ಶೇ. 13.00 ಇ.ಎಸ್.ಐ. ಬಾಬ್ತು ಶೇ.3.25 | ರೂ.1768.91 |
| 3 | ಗಳಿಕೆ ರಜೆಯ ಬಾಬ್ತು=13.25xಪ್ರತಿ ದಿನದ ವೇತನ/ 365 ಹಾಗೂ ಸಾರ್ವಜನಿಕ ರಜೆ ಬಾಬ್ತು=10ದಿನ xಪ್ರತಿ ದಿನದ ವೇತನ/ 365 | ರೂ. 842.52 |
| 4 | ಗುತ್ತಿಗೆದಾರರಿಗೆ ನೀಡುವ ಮೊತ್ತ | ರೂ. 13497.03 |
| 5 | ಉದ್ಯೋಗಿಯ ಪಿ.ಎಫ್, ಇ.ಎಸ್.ಐ. ಬಾಬ್ತು | ರೂ. 1387.91 |
| 6 | ಕಾರ್ಮಿಕರಿಗೆ ನೀಡುವ ಮೊತ್ತ ಪ್ರತಿ ಮಾಹೆಗೆ | ರೂ.10340.20 |
| 7 | ಗುತ್ತಿಗೆ ದಾರರಿಗೆ ನೀಡುವ ಮೊತ್ತ ಪ್ರತಿ ದಿನಕ್ಕೆ | ರೂ. 519.12 |
| 8 | ಕಾರ್ಮಿಕರಿಗೆ ನೀಡುವ ಮೊತ್ತ ಪ್ರತಿ ದಿನಕ್ಕೆ | ರೂ. 397.70 |
| 9 | ಸೇವಾ ಶುಲ್ಕ = ಕ್ರ.ಸಂ. 4 x ಸೇವಾ ಶುಲ್ಕ ಅನ್ವಯಿಸುತ್ತದೆ. | 0.01% |
| 10 | ಒಟ್ಟು ಮೊತ್ತ ಕ್ರ.ಸಂ. (4+9) | |
| 11 | G.S.T ಕ್ರ.ಸಂ. 10 x G.S.T ಅನ್ವಯವಾಗುವಂತೆ (ಶೇ. 18 %) | |

07/08

2/8/19 7/8 3/8/19

ರವಾನಿಸಲಾಗಿದೆ 1087
06/08/19

6/8/19

ಘಟಕದ ವಿವಿಧ ಕೆಲಸಗಳನ್ನು ಭಾಗ-ಎ ಭಾಗದಲ್ಲಿ ವಿಂಗಡಿಸಿ ಪ್ರತಿ ದಿನಕ್ಕೆ 3 ಪಾಳಿಗಳ ಕೆಲಸಗಳಿಗೆ ಬೇಕಾದ ಕಾರ್ಮಿಕರ ಸಂಖ್ಯೆಯನ್ನು ಈ ಕೆಳಕಂಡ ಕೋಷ್ಟಕದಂತೆ ನಿಗಧಿಪಡಿಸಲಾಗಿದೆ.

| ಕ್ರ.ಸಂ. | ಕೆಲಸದ ಪ್ರಕಾರ ಮತ್ತು ಸ್ಥಳ | ನುರಿತರಲ್ಲದವರ ಕಾರ್ಮಿಕರ ಸಂಖ್ಯೆ |
|---|---|---|
| 1 | ಸಂಸ್ಕರಣಾ/ವೇಬ್ರಿಡ್ಜ್ | 15 |
| 2 | ಹಾಲಿನ ಪುಡಿ ವಿಭಾಗ | 40 |
| 3 | ಬೆಣ್ಣೆ ವಿಭಾಗ | 40 |
| 4 | ತುಪ್ಪ ವಿಭಾಗ | 14 |
| 5 | ಬೆಣ್ಣೆ ಬಾಕ್ಸ್ ಸಾಗಾಣಿಕೆ | 16 |
| 6 | ಗುಣ ನಿಯಂತ್ರಣ ವಿಭಾಗ | 18 |
| 7 | ಯು.ಹೆಚ್.ಟಿ ವಿಭಾಗ | 95 |
| 8 | ನೂತನ ಹಾಲಿನ ಪುಡಿ | 40 |
| 9 | ನೂತನ ಬಾಯ್ಲರ್ | 11 |
| 10 | ಲಟ್ಟೈಲ್ ಪ್ಯಾಕಿಂಗ್ | 21 |
|  | ಒಟ್ಟು | 310 |

* ರಾತ್ರಿ ಪಾಳಿಯಲ್ಲಿ ಯು.ಹೆಚ್.ಟಿ ಉತ್ಪಾದನೆ ಇದ್ದಲ್ಲಿ ಗುತ್ತಿಗೆ ಕಾರ್ಮಿಕರನ್ನು ನೀಡುವುದು. ಘಟಕದ ಉತ್ಪಾದನೆಗೆ ಅನುಗುಣವಾಗಿ 3 ಪಾಳಿಗಳನ್ನು ಒಳಗೊಂಡಂತೆ ಅವಶ್ಯಕತೆಗನುಗುಣವಾಗಿ ಕಾರ್ಮಿಕರನ್ನು ಪಡೆಯಲಾಗುವುದು.

<u>ಷರತ್ತು ಮತ್ತು ನಿಬಂಧನೆಗಳು:</u>

1.0 ಗುತ್ತಿಗೆಯ ಸಿಂಧುತ್ವ:

1. ಗುತ್ತಿಗೆಯ ಅವಧಿಯು ಕರಾರಿನಂತೆ ಕೆಲಸದ ಆದೇಶ ಜಾರಿಗೆ ಬರುವ ದಿನಾಂಕದಿಂದ ಎರಡು ವರ್ಷಗಳ ಅವಧಿಗೆ ಜಾರಿಯಲ್ಲಿರುತ್ತದೆ.
2. ಕರಾರನ್ನು ಸಹಿ ಮಾಡಿದ ಮತ್ತು ನಿಗದಿಪಡಿಸಿದ ಭದ್ರತಾ ಠೇವಣಿಯನ್ನು ಬ್ಯಾಂಕ್ ಗ್ಯಾರಂಟಿ ರೂಪದಲ್ಲಿ ಕರ್ನಾಟಕ ಬ್ಯಾಂಕ್ ಬೆಂಗಳೂರು ಇಲ್ಲಿ ರೂ. 29,58,000/-ಗಳನ್ನು ದಿನಾಂಕ: 28.06.2019 ರಂದು ಸಲ್ಲಿಸಿದ್ದು, ನಂದಿನಿ ಹೈಟೆಕ್ ಪ್ರಾಡಕ್ಟ್ ಪ್ಲಾಂಟ್ ಘಟಕವು ಹೊರಡಿಸುವ ಆದೇಶದ ದಿನಾಂಕದಿಂದ ಗುತ್ತಿಗೆಯು ಪ್ರಾರಂಭವಾಗುವುದು.
3. ಗುತ್ತಿಗೆ ಅವಧಿಯು ಮುಕ್ತಾಯಗೊಂಡ ನಂತರ ವಿವೇಚನೆಯ ಮೇರೆಗೆ ಪ್ರಸ್ತುತ ಗುತ್ತಿಗೆ ಷರತ್ತಿಗೆ ಒಳಪಟ್ಟು ಹಾಲಿ ಜಾರಿಯಲ್ಲಿರುವ ದರದಲ್ಲಿಯೆ ಗುತ್ತಿಗೆ ಅವಧಿಯನ್ನು ೯೦ ದಿನಗಳ ಅವಧಿಗೆ ವಿಸ್ತರಿಸುವ ಅಧಿಕಾರವನ್ನು ನಿರ್ದೇಶಕರು ಬಂಹಾಪ ರವರು ಹೊಂದಿರುತ್ತಾರೆ.

2.0 ಗುತ್ತಿಗೆ ದರ :

1. ವಿಸ್ತರಿಸಿದ ಅವಧಿ ಒಳಗೊಂಡು ಗುತ್ತಿಗೆ ಅವಧಿಯಲ್ಲಿ ಗುತ್ತಿಗೆ ದರವು ಕ್ರಮ ಸಂಖ್ಯೆ2 ಮತ್ತು 3 ಕ್ಕೆ ಒಳಪಟ್ಟು ಯಾವುದೆ ಹೆಚ್ಚಳ/ ಇಳಿಕೆ ಇಲ್ಲದೆ ಸ್ಥಿರವಾಗಿ ಇರುತ್ತದೆ.
2. ಒಪ್ಪಂದದ ಪ್ರಕಾರ ಪೂರ್ಣವಾಗಿ ಮತ್ತು ತೃಪ್ತಿಕರವಾಗಿ ನಿರ್ವಹಿಸಿದ ಕೆಲಸಕ್ಕೆ ಬಿಲ್ ಮೊತ್ತವನ್ನು ಘಟಕವು ಸಂಬಂಧಪಟ್ಟ ಗುತ್ತಿಗೆದಾರರಿಗೆ ಪಾವತಿಸಲಾಗುವುದು.
3. ಸರ್ಕಾರವು ಗುತ್ತಿಗೆ ಕಾರ್ಮಿಕರಿಗೆ ಕಾಲ ಕಾಲಕ್ಕೆ ಪರಿಷ್ಕರಿಸುವ ಕನಿಷ್ಠ ವೇತನ ಮತ್ತು ತುಟ್ಟಿ ಭತ್ಯೆಯ ಹೆಚ್ಚುವರಿ ಮೊಬಲಗನ್ನು PF ಮತ್ತು ESI ಗಳಿಗೆ ಸಂಬಂಧಿಸಿದಂತೆ ಗುತ್ತಿಗೆದಾರರ ಹೆಚ್ಚುವರಿ ಭಾಗದೊಂದಿಗೆ ಘಟಕದಿಂದ ಪಾವತಿಸಲಾಗುವುದು.
4. ಗುತ್ತಿಗೆದಾರರು ತಮ್ಮ ಸಿಬ್ಬಂದಿಗೆ ವಾರ್ಷಿಕವಾರು ಬೋನಸ್ ಕಾಯಿದೆಯನ್ವಯ ಬೋನಸ್ ಘೋಷಿಸಿ ಪಾವತಿ ಮಾಡಿದ್ದಾದಲ್ಲಿ ಅದನ್ನು ಕಹಾಮ ಇದರ ಕಾಯ್ದೆ ನಿಯಮಗಳಿಗೆ ಒಳಪಟ್ಟು ಪುನರಾಭರಣ ಮಾಡಲು ಕ್ರಮವಿಡಲಾಗುವುದು. ಅದಕ್ಕೆ ಪೂರ್ವದಲ್ಲಿ ಗುತ್ತಿಗೆದಾರರು ಬೋನಸ್‌ನ್ನು ಅರ್ಹ ಕಾರ್ಮಿಕರಿಗೆ ನಿಯಮಾನುಸಾರ ಘಟಕದ ಪ್ರತಿನಿಧಿಯ ಸಮ್ಮುಖದಲ್ಲಿ ಪಾವತಿಸುವುದು ಮತ್ತು ಪುಸ್ತಕದಲ್ಲಿ ಈ ದೃಢೀಕರಣ ಪಡೆಯುವುದು.
5. ನಿಯಮಾನುಸಾರ ಪಾವತಿಸುವ ಸೇವಾ ತೆರಿಗೆಯನ್ನು ಘಟಕದಿಂದ ಮರುಪಾವತಿಸಲಾಗುವುದು.

3.0 ಬಿಲ್ ಪಾವತಿ:

1. ಗುತ್ತಿಗೆದಾರರು ಪ್ರತಿ ತಿಂಗಳು ನಿಯೋಜಿಸಿದ ನೌಕರರ ಹಾಗೂ ಇತರೆ ದಾಖಲೆಗಳನ್ನು ಒಳಗೊಂಡ ಬಿಲ್ ಗಳನ್ನು ಎರಡನೆ ದಿನಾಂಕದೊಳಗಾಗಿ ನಿಗದಿಪಡಿಸಿದ ನಮೂನೆಯಲ್ಲಿ ದ್ವಿಪ್ರತಿಯಲ್ಲಿ ನಿರ್ದೇಶಕರು ನಹ್ಮೈಪ್ರಾಪ್ಲಾ ಜರಾಪ ರವರಿಗೆ ಸಲ್ಲಿಸಬೇಕು. ನಿಬಂಧನೆಗೆ ಅನುಸಾರ ಕೆಲಸವನ್ನು ತೃಪ್ತಿಕರವಾಗಿ ನಿರ್ವಹಿಸಿದ ಬಗ್ಗೆ ಸಂಬಂಧಿಸಿದ ಅಧಿಕಾರಿಗಳ ಪರಿಶೀಲನೆ ಮತ್ತು ದೃಢೀಕರಣದ ಆಧಾರದ ಮೂಲದಲ್ಲಿ ಅಧಾಯ ತೆರಿಗೆಯ (TDS) ಕಟಾವಣೆ ಒಳಗೊಂಡು ಎಲ್ಲಾ ಶಾಸನಬದ್ಧ ಕಟಾವಣೆ ಮತ್ತು ಘಟಕಕ್ಕೆ ಬರಬೇಕಾದ ಮೊತ್ತ ಹಾಗೂ ವಿಧಿಸಬಹುದಾದ ದಂಡಗಳ ಕಟಾವಣೆ ಮಾಡಿ ಉಳಿಕೆ ಮೊತ್ತವನ್ನು ಚೆಕ್ ಮುಖೇನ ಗುತ್ತಿಗೆದಾರರಿಗೆ ಪಾವತಿಸಲಾಗುವುದು.
2. ಗುತ್ತಿಗೆದಾರರು ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ ಹಣ ಪಡೆಯಲು ಇಚ್ಛಿಸಿದಲ್ಲಿ ತಾವೇ ಸ್ವತ: ಡಿ.ಡಿ. ವೆಚ್ಚವನ್ನು ಭರಿಸಬೇಕಾಗುತ್ತದೆ.
3. ಗುತ್ತಿಗೆದಾರರು ಘಟಕದಲ್ಲಿ ಗುತ್ತಿಗೆಯನ್ನು ನಿರ್ವಹಿಸುವ ಅವಧಿಯಲ್ಲಿ ಘಟಕದಿಂದ ಪಡೆಯುವ ಅಥವಾ ಲಭ್ಯವಾಗುವ ಘಟಕದ ವ್ಯವಹಾರ ನಿರ್ವಹಣೆಗೆ ಸಂಬಂಧಿಸಿದ ಲಿಖಿತ ಮತ್ತು ಮೌಖಿಕ ಮಾಹಿತಿಯನ್ನು ಯಾರಿಗೂ ಬಯಲು ಮಾಡಬಾರದು ಮತ್ತು ಅಂತಹ ಮಾಹಿತಿಯ ರಹಸ್ಯವನ್ನು ಕಾಪಾಡಬೇಕು.
4. ಗುತ್ತಿಗೆ ಅವಧಿಯಲ್ಲಿ ಸರ್ಕಾರವು ಗುತ್ತಿಗೆ ಕಾರ್ಮಿಕರಿಗೆ ನಿಗದಿಪಡಿಸುವ ಹಾಗೂ ಕಾಲಕಾಲಕ್ಕೆ ಪರಿಷ್ಕರಿಸುವ ಕನಿಷ್ಠ ವೇತನ ದರಗಳನ್ನು ಮತ್ತು ತುಟ್ಟಿಭತ್ಯೆಯನ್ನು ಹಾಗೂ ಶಾಸನಬದ್ಧ ಪಾವತಿಗಳನ್ನು ಪಾವತಿಸಲು ಗುತ್ತಿಗೆದಾರರು ಬದ್ಧರಿರಬೇಕು.
5. ಗುತ್ತಿಗೆ ಕೆಲಸಗಾರರಿಂದ ಪ್ರತಿದಿನ 8 ಘಂಟೆಗಳಿಗೂ ಹೆಚ್ಚು ಅವಧಿಯ ಕೆಲಸವನ್ನು ಮಾಡಿಸಬಾರದು. ಕಡ್ಡಾಯವಾಗಿ ವೇತನದೊಂದಿಗೆ ವಾರದ ರಜೆ , ರಾಷ್ಟ್ರೀಯ ಮತ್ತು ಹಬ್ಬಗಳ (ಸಾರ್ವತ್ರಿಕ) ರಜೆ ಹಾಗೂ ಗಳಿಕೆ ರಜೆ ನೀಡಬೇಕು. ಗುತ್ತಿಗೆದಾರರು ಒದಗಿಸುವ ಕೆಲಸಗಾರರಿಗೆ ಭವಿಷ್ಯನಿಧಿ , ನೌಕರರ ರಾಜ್ಯ ವಿಮಾ ವಂತಿಗೆ ಮತ್ತು ಆಡಳಿತಾತ್ಮಕ ವೆಚ್ಚ ಒಳಗೊಂಡು ಎಲ್ಲಾ ಖರ್ಚುಗಳನ್ನು ಭರಿಸಿ ಶಾಸನಾತ್ಮಕ ಸೌಲಭ್ಯಗಳನ್ನು ಒದಗಿಸಬೇಕು. ಗುತ್ತಿಗೆದಾರರು ತಾವು ನಿಯೋಜಿಸುವ ಕೆಲಸಗಾರರಿಗೆ ಬೋನಸ್ ಹಾಗೂ ಉಪಧನ (Gratuity) ಪಾವತಿ ಬಗ್ಗೆ ಕಾನೂನು ಪ್ರಕಾರ ಕ್ರಮ ಕೈಗೊಳ್ಳಲು ಜವಾಬ್ದಾರರಾಗಿರುತ್ತಾರೆ. ಗುತ್ತಿಗೆ ಕೆಲಸಗಾರರ ವಿರುದ್ಧ ಶಿಸ್ತು ಕ್ರಮಕೈಗೊಳ್ಳುವ ಸಂದರ್ಭದಲ್ಲಿ ಸಹಜ ನ್ಯಾಯದ ನಿಯಮಗಳನ್ನು ಗುತ್ತಿಗೆದಾರರು ಅನುಸರಿಸಬೇಕು. ಪ್ರತಿ ತಿಂಗಳ 07 ನೇ ತಾರೀಖಿನ ಮೊದಲು ಗುತ್ತಿಗೆದಾರರು ಘಟಕದಿಂದ ನಾಮನಿರ್ದೇಶನಗೊಂಡ ಅಧಿಕಾರಿಗಳ ಸಮ್ಮುಖದಲ್ಲಿ ಕಾಯ್ದೆಗನುಗುಣವಾಗಿ (ಘಟಕದಿಂದ ಬಿಲ್ ಪಾವತಿ ಅಗದೇ ಇದ್ದರು ಸಹ) ಗುತ್ತಿಗೆ ಸಿಬ್ಬಂದಿಗಳಿಗೆ ಬ್ಯಾಂಕ್ ಖಾತೆಯ ಮೂಲಕ ವೇತನವನ್ನು ಪಾವತಿಸಬೇಕು ಮತ್ತು ವೇತನ ಪುಸ್ತಕದಲ್ಲಿ (ಮಸ್ಟರ್ ರೋಲ್‌ನಲ್ಲಿ ) ಈ ಬಗ್ಗೆ ದೃಢೀಕರಣ ಪಡೆಯಬೇಕು.
6. ಘಟಕದಲ್ಲಿ ಕರ್ತವ್ಯ ನಿರ್ವಹಿಸುವ ಸಂದರ್ಭದಲ್ಲಿ ಸಂಭವಿಸಬಹುದಾದ ಯಾವುದೇ ಅಪಘಾತಗಳಿಂದ ಗುತ್ತಿಗೆದಾರರು ನಿಯೋಜಿಸುವ ಕೆಲಸಗಾರರಿಗೆ ಊನ ಅಥವಾ ಅಂಗಹೀನತೆ ಉಂಟಾದಲ್ಲಿ ಅಥವಾ ಸಾವು ಸಂಭವಿಸಿದಲ್ಲಿ ಹಾಗೂ ಯಾವುದೇ ವೈದ್ಯಕೀಯ ವೆಚ್ಚಗಳಿಗೆ ಗುತ್ತಿಗೆದಾರರೇ ಜವಾಬ್ದಾರರಾಗಿರುತ್ತಾರೆ ಹಾಗೂ ಸಂಬಂಧಿಸಿದ ಕಾನೂನು/ ನಿಯಮಗಳಲ್ಲಿ ಸೂಚಿಸಿದಂತೆ ಈ ಬಗ್ಗೆ ತಗಲುವ ವೆಚ್ಚ / ಸೌಲಭ್ಯಗಳನ್ನು ಮತ್ತು ಪರಿಹಾರವನ್ನು ಪಾವತಿಸಲು ಗುತ್ತಿಗೆದಾರರೇ ಹೊಣೆಯಾಗಿರುತ್ತಾರೆ. ಸಕಾಲಕ್ಕೆ ESI / Insurance ಮುಂತಾದ ಪ್ರಾಧಿಕಾರಗಳಿಗೆ ಅಪಘಾತ ವರದಿ ಮಾಡಲು ಮತ್ತು ಸೂಕ್ತ ಮಾಹಿತಿ ಒದಗಿಸಲು ಜವಾಬ್ದಾರರಾಗಿರುತ್ತಾರೆ.
7. ಗುತ್ತಿಗೆದಾರರು ಒದಗಿಸುವ ಕೆಲಸಗಾರರು ಘಟಕದ ಹಿತಾಸಕ್ತಿಗೆ ಮಾರಕವಾಗುವ ತರಹ ಕಾನೂನುಬಾಹಿರ ಚಟುವಟಿಕೆಗಳಲ್ಲಿ ತೊಡಗಿರಬಾರದು. ಘಟಕದ ಆವರಣದ ಒಳಗೆ ಮತ್ತು ಹೊರಗೆ ಗುತ್ತಿಗೆ ಕೆಲಸಗಾರರ ಕೃತ್ಯಗಳಿಗೆ ಗುತ್ತಿಗೆದಾರರೇ ಹೊಣೆಗಾರರು. ಆದ್ದರಿಂದ ಘಟಕಕ್ಕೆ ನಷ್ಟವಾದಲ್ಲಿ ಗುತ್ತಿಗೆದಾರರೇ ಭರಿಸಬೇಕಾಗುತ್ತದೆ. ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಯಾವುದೇ ರೀತಿಯಲ್ಲಿ ಘಟಕದ ಹಿತಾಸಕ್ತಿಗೆ ಧಕ್ಕೆಯಾಗದಂತೆ ಗುತ್ತಿಗೆದಾರರು ಕಾರ್ಯ ನಿರ್ವಹಿಸಬೇಕು.
8. ಗುತ್ತಿಗೆದಾರರು ಘಟಕದ ಆಸ್ತಿಯನ್ನು ಜಾಗರೂಕತೆಯಿಂದ ರಕ್ಷಿಸಿ ಕಾಪಾಡಬೇಕು ಮತ್ತು ಯಾವುದೇ ಅಗಬಾರದ ಘಟನೆ ಸಂಭವಿಸದಂತೆ ಜಾಗ್ರತೆ ವಹಿಸಬೇಕು. ಗುತ್ತಿಗೆದಾರರು ಒದಗಿಸಿರುವ ಕೆಲಸಗಾರರ ನಿರ್ಲಕ್ಷ್ಯ ಹಾಗೂ ಬೇಜವಾಬ್ದಾರಿಯಿಂದ ಅಥವಾ ಉದ್ದೇಶ ಪೂರ್ವಕವಾಗಿ ಘಟಕಕ್ಕೆ ನಷ್ಟ ಉಂಟಾದಲ್ಲಿ, ಕಳವು ಆದಲ್ಲಿ, ವಸ್ತುಗಳು ತುಂಡಾದಲ್ಲಿ ಅವುಗಳ ಪೂರ್ಣ ಮೊತ್ತವನ್ನು ಘಟಕಕ್ಕೆ ಭರಿಸಲು ಗುತ್ತಿಗೆದಾರರು ಬದ್ಧರಿರಬೇಕು ಹಾಗೂ ಹೀಗೆ ಆಗುವ ನಷ್ಟವನ್ನು ದಂಡದೊಂದಿಗೆ ಮಾಹೆಯಾನ ಬಿಲ್ಲು / ಭದ್ರತಾ ಠೇವಣಿಯಲ್ಲಿ ಕಟಾಯಿಸಲಾಗುವುದು ಗುತ್ತಿಗೆ / ಕಾರ್ಮಿಕರನ್ನು ಟೆಂಡರುದಾರರು ಘಟಕದ ಬೇಡಿಕೆ ಸೂಚನೆಗನುಗುಣವಾಗಿ ಉತ್ತಮವಾಗಿ ನಿಗಧಿತ ಸಮಯದಲ್ಲಿ ಒದಗಿಸಬೇಕು.

9. ಗುತ್ತಿಗೆದಾರರು ತಮಗೆ ವಹಿಸಿದ ಕೆಲಸ ಕಾರ್ಯಗಳನ್ನು ನಿರ್ವಹಿಸಲು ಪಡೆಯುವ ಕೆಲಸಗಾರರು ಗುತ್ತಿಗೆದಾರರ ನೌಕರರಾಗಿದ್ದು, ಯಾವಾಗಲು ಗುತ್ತಿಗೆದಾರರ ನೇರ, ಅನನ್ಯ (exclusive) ನಿಯಂತ್ರಣ ಮತ್ತು ಮೇಲ್ವಿಚಾರಣೆಗೆ ಒಳಪಟ್ಟಿರುತ್ತಾರೆ.

10. ಯಾವುದೇ ಕಾರಣಕ್ಕೆ ಗುತ್ತಿಗೆ ಕೆಲಸಗಾರರು ಘಟಕದ ನೌಕರರಲ್ಲ. ಆದ್ದರಿಂದ ಗುತ್ತಿಗೆ ಕೆಲಸಗಾರರ ತಪ್ಪು ಒಪ್ಪುಗಳಿಗೆ ಗುತ್ತಿಗೆದಾರರೇ ಜವಾಬ್ದಾರರು. ಘಟಕ ಮತ್ತು ಗುತ್ತಿಗೆದಾರರು/ ಗುತ್ತಿಗೆ ಕೆಲಸಗಾರರು ಇವರುಗಳ ಮಧ್ಯೆ ಯಾವುದೇ ರೀತಿಯಲ್ಲಿ ಏನೇ ಆದರೂ ಮಾಲೀಕ -ನೌಕರ ಸಂಬಂಧವಿರುವುದಿಲ್ಲ ಮತ್ತು ಗುತ್ತಿಗೆದಾರರು ಸ್ವಾತಂತ್ರ್ಯ ಏಜೆನ್ಸಿಯಾಗಿ ತಮ್ಮ ವ್ಯವಹಾರವನ್ನು ನಿರ್ವಹಿಸಬೇಕಾಗಿದ್ದು ಈ ವಾಸ್ತವಾಂಶವನ್ನು ಗುತ್ತಿಗೆದಾರರು ತಾವು ಕೆಲಸಕ್ಕೆ ನಿಯೋಜಿಸುವ ಎಲ್ಲರಿಗೂ ಸ್ಪಷ್ಟಪಡಿಸಬೇಕಾಗುತ್ತದೆ. ಗುತ್ತಿಗೆ ಅವಧಿಯು ಗುತ್ತಿಗೆ ಮಂಜೂರಾದ ದಿನಾಂಕದಿಂದ ಎರಡು ವರ್ಷಗಳದ್ದಾಗಿದ್ದು ಈ ಅವಧಿಯಲ್ಲಿ ಗುತ್ತಿಗೆದಾರರ ಕೆಲಸಕಾರ್ಯಗಳು ತೃಪ್ತಿಕರ / ಸಮರ್ಪಕವಾಗಿಲ್ಲದಿದ್ದಲ್ಲಿ ಗುತ್ತಿಗೆಯನ್ನು ರದ್ದುಪಡಿಸುವ ಹಾಗೂ ಭದ್ರತಾ ಠೇವಣಿಯನ್ನು ಮುಟ್ಟುಗೋಲು ಹಾಕಿಕೊಳ್ಳುವ ಹಾಗೂ ಕಪ್ಪು ಪಟ್ಟಿಗೆ ಸೇರಿಸುವ ಅಧಿಕಾರವನ್ನು ಘಟಕವು ಕಾಯ್ದಿರಿಸಿಕೊಂಡಿರುತ್ತದೆ.

11. ಘಟಕದ ಆವರಣದಲ್ಲಿ ಘಟಕವು ವಹಿಸಿರುವ ಗುತ್ತಿಗೆ ಕೆಲಸವನ್ನು ಮಾತ್ರ ನಿರ್ವಹಿಸಲು ಗುತ್ತಿಗೆದಾರರು ಮತ್ತು ಅವರ ಕೆಲಸಗಾರರಿಗೆ ಅವಕಾಶ ನೀಡಲಾಗಿದ್ದರೂ ಘಟಕದ ಆವರಣದ ಮೇಲೆ ಗುತ್ತಿಗೆದಾರರಿಗೆ ಯಾವುದೇ ಹಕ್ಕು ಸ್ವಾಮ್ಯ ಅಥವಾ ಧಾರಣಾಧಿಕಾರ (right, title orlien) ಇರುವುದಿಲ್ಲ. ಗುತ್ತಿಗೆದಾರರು ಮತ್ತು ಅವರ ಕೆಲಸಗಾರರು ಘಟಕದ ವಿವೇಚನೆ ಮೇರೆಗೆ ಘಟಕದ ಆವರಣವನ್ನು ತೆರವುಗೊಳಿಸಿ ಹೊರಹೋಗಬೇಕು. ಗುತ್ತಿಗೆದಾರರ ಕೆಲಸಗಾರರಿಂದ ಘಟಕದ ಕೆಲಸ ಕಾರ್ಯಗಳಿಗೆ ತೊಂದರೆ ಉಂಟು ಮಾಡುವ ಬೆದರಿಕೆಯಿಂದಾಗಿ ಕೈಗಾರಿಕಾ ಸಂಬಂಧದ ಸಮಸ್ಯೆ ಉದ್ಭವಿಸಿದಲ್ಲಿ ಗುತ್ತಿಗೆಯನ್ನು 24 ಘಂಟೆಯೊಳಗೆ ರದ್ದುಪಡಿಸಲಾಗುವುದು ಮತ್ತು ಗುತ್ತಿಗೆದಾರರು ಆ ಅವಧಿಯೊಳಗೆ ಕೆಲಸಕಾರ್ಯಗಳನ್ನು ನಿರ್ವಹಿಸಲು ಹೊಸ ಗುತ್ತಿಗೆದಾರರಿಗೆ / ವ್ಯವಸ್ಥೆಗೆ ಅವಕಾಶವಾಗುವಂತೆ ಘಟಕದ ಆವರಣವನ್ನು ತೆರವುಗೊಳಿಸಬೇಕು.

12. ಸಂಸ್ಥೆಯ ಹಿತದೃಷ್ಟಿಯಿಂದ ಗುತ್ತಿಗೆಯ ಅವಧಿಯಲ್ಲಿ ಗುತ್ತಿಗೆಯನ್ನು ತಕ್ಷಣದಿಂದ ರದ್ದುಗೊಳಿಸುವುದು ಅವಶ್ಯವೆಂದು ಕಂಡು ಬಂದಲ್ಲಿ ಯಾವುದೇ ಕಾರಣವನ್ನು ನಮೂದಿಸದೇ ಉಚಿತ ನೋಟೀಸ್‌ನ್ನು ನೀಡಿ ಗುತ್ತಿಗೆಯನ್ನು ರದ್ದುಪಡಿಸುವ ಅಧಿಕಾರವನ್ನು ಘಟಕವು ಕಾಯ್ದಿರಿಸಿಕೊಂಡಿದೆ.

13. ಗುತ್ತಿಗೆದಾರರು ಘಟಕದಿಂದ ನೀಡಲಾಗುವ ಗುತ್ತಿಗೆಯನ್ನು ಭಾಗಶಃವಾಗಲಿ/ ಪೂರ್ಣವಾಗಿ ಬೇರೆಯವರಿಗೆ ಒಳಗುತ್ತಿಗೆಗೆ / ಒಳಬಾಡಿಗೆಗೆ ನೀಡಬಾರದು.

14. ಗುತ್ತಿಗೆ ಕೆಲಸಗಾರರಿಗೆ ವಿವಿಧ ಕಾನೂನುಗಳಲ್ಲಿ ನಿಗಧಿಪಡಿಸಿದ ಸೌಲಭ್ಯ ಮತ್ತು ಸವಲತ್ತುಗಳನ್ನು ನೀಡುವುದು ಗುತ್ತಿಗೆದಾರರ ಶಾಸನಬದ್ಧ ಹೊಣೆಗಾರಿಕೆಯಾಗಿದ್ದರು ಅವುಗಳಿಗಿಂತ ಹೆಚ್ಚಿನ ಸೌಲಭ್ಯಗಳನ್ನು ನೀಡುವುದಾದಲ್ಲಿ ಸದರಿ ವೆಚ್ಚವನ್ನು ಗುತ್ತಿಗೆದಾರರೇ ಸ್ವತಃ ಭರಿಸಬೇಕು. ಆದಾಗ್ಯೂ ಎಲ್ಲೆಲ್ಲಿ ಅನ್ವಯಿಸುವುದೋ ಅಂತಹ ಸ್ಥಳಗಳಲ್ಲಿ ಆರೋಗ್ಯ ಮತ್ತು ನೈರ್ಮಲ್ಯ ಕಾಪಾಡುವ ದೃಷ್ಟಿಯಿಂದ ಮತ್ತು ಸುರಕ್ಷಾ ಕ್ರಮಗಳ ಅನುಷ್ಠಾನಗೊಳಿಸುವಲ್ಲಿ ಘಟಕವು ನೀಡುವ ಸಲಹೆ ಸೂಚನೆಗಳಂತೆ ವಸ್ತ್ರನೀತಿಯನ್ನು ಕಡ್ಡಾಯವಾಗಿ ಪಾಲಿಸಲು ಗುತ್ತಿಗೆದಾರರು ಜವಾಬ್ದಾರರಾಗಿರುತ್ತಾರೆ.

15. ಗುತ್ತಿಗೆದಾರರು ಒದಗಿಸುವ ಎಲ್ಲಾ ಕೆಲಸಗಾರರನ್ನು ಕಾನೂನಿನ ಅನ್ವಯ ವೈದ್ಯಕೀಯ ತಪಾಸಣೆಗೆ ಒಳಪಡಿಸಿ ಅವರುಗಳ ಆರೋಗ್ಯ ದೃಢೀಕರಣ ಪತ್ರವನ್ನು ಪಡೆದಿರಬೇಕು. ಮಾತ್ರವಲ್ಲದೆ ಕೆಲಸಗಾರರು ತಮ್ಮ ದೈಹಿಕ/ ವಸ್ತ್ರಗಳ ಸ್ವಚ್ಛತೆಯನ್ನು ಕಾಪಾಡಿ ಮುಖ ಕ್ಷೌರ ಮಾಡಿಸಿರಬೇಕು / ತಲೆಗೂದಲು / ಉಗುರು ಕತ್ತರಿಸಿರಬೇಕು. ಕೆಲಸಗಾರರು ಎಲೆ ಅಡಿಕೆ/ಬೀಡ/ತಂಬಾಕು/ಗುಟ್ಕಾ ಮುಂತಾದ ಜಗಿಯುವ ಪದಾರ್ಥಗಳನ್ನು ಹಾಗೂ ನಶ್ಯ ಸೇವನೆ ಧೂಮಪಾನ, ಮದ್ಯಸೇವನೆ ಮಾಡಿ ಕೆಲಸಕ್ಕೆ ಬರಬಾರದು ಮತ್ತು ಇವುಗಳನ್ನು ಕೆಲಸದ ಅವಧಿಯಲ್ಲಿ ಮಾಡಬಾರದು ಹಾಗೂ ಯಾವುದೇ ಕಾರಣಕ್ಕೂ ಘಟಕದ ಮಾಜಿ ಸಿಬ್ಬಂದಿ / ಗುತ್ತಿಗೆ ಭದ್ರತಾ ಸಿಬ್ಬಂದಿಗಳನ್ನು ನಿಯೋಜಿಸಿಕೊಳ್ಳಬಾರದು.

16. ಕಾಲಕಾಲಕ್ಕೆ ಆಗುವ ತಿದ್ದುಪಡಿಗಳೊಂದಿಗೆ ಜಾರಿಯಲ್ಲಿರುವ ವೇತನ ಪಾವತಿ ಕಾಯಿದೆ 1936, ಕನಿಷ್ಠ ವೇತನ ಕಾಯಿದೆ 1948, ಗುತ್ತಿಗೆ ಕಾರ್ಮಿಕ (ನಿಯಂತ್ರಣ ಮತ್ತು ರದ್ಧತಿ) ಕಾಯಿದೆ 1970, ನೌಕರರ ರಾಜ್ಯ ವಿಮಾ ಕಾಯಿದೆ 1948/ ಕೆಲಸಗಾರರ ಪರಿಹಾರ ಕಾಯಿದೆ 1923 ನೌಕರರ ಭವಿಷ್ಯನಿಧಿ ಮತ್ತು ಸಂಕೀರ್ಣ ಉಪಬಂಧ ಗಳ ಕಾಯಿದೆ 1952 ಬೋನಸ್ ಪಾವತಿ ಕಾಯಿದೆ, 1965 ಕಾರ್ಖಾನೆ ಕಾಯಿದೆ , 1948 ಉಪಧನ ಕಾಯಿದೆ , 1972 , ಕರ್ನಾಟಕ ಕಾರ್ಮಿಕ ಕಲ್ಯಾಣ ನಿಧಿ ಕಾಯಿದೆ 1965 , ಕರ್ನಾಟಕ ಕೈಗಾರಿಕೆ ಸಂಸ್ಥೆಗಳ (ರಾಷ್ಟ್ರೀಯ ಮತು ಹಬ್ಬದ ರಜಾ ದಿನಗಳು) ನಿಯಮಗಳು 1963 , ಆದಾಯ/ ವೃತ್ತಿ/ ಸೇವಾತೆರಿಗೆ

